# ಶ್ರೀಹರಿವಾಯು ಸ್ತುತಿ

ವಿದ್ವಾನ್ : ಕೆ. ಹಯವದನ ಪುರಾಣಿಕ



ಆನಂದತೀರ್ಥ ಪ್ರತಿಷ್ಠಾನ
ಬೆಂಗಳೂರು-28

# ಶ್ರೀ ಹರಿ ವಾಯು ಸ್ತುತಿ

## (ಶ್ರೀ ಹರಿ ವಾಯು ಉಭಯಪರ ವ್ಯಾಖ್ಯಾನದೊಂದಿಗೆ)

ವಿದ್ವಾನ್ **ಕೆ. ಹಯವದನ ಪುರಾಣಿಕ** ಎಮ್ ಎ ,
ಪ್ರಾಂಶುಪಾಲರು
ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು - ೨೮

ಅಖಿಲ ಭಾರತ ಮಾಧ್ವಮಹಾಮಂಡಲ
**ಪೂರ್ಣಪ್ರಜ್ಞ ವಿದ್ಯಾಪೀಠ,**
**ಬೆಂಗಳೂರು - 28**

# ಶ್ರೀ ಹರಿವಾಯು ಸ್ತುತಿ
## (Sri Hari Vayu Stuti)

ಪ್ರಥಮ ಮುದ್ರಣ : ೧೯೮೮
ಮುದ್ರಿತ ಪ್ರತಿಗಳು : ೨೦೦೦
ದ್ವಿತೀಯ ಮುದ್ರಣ : ೧೯೯೫
ಮುದ್ರಿತ ಪ್ರತಿಗಳು : ೧೦೦೦

ಪುಟಗಳು : ೧೨೬

ಬೆಲೆ :

Rights Reserved

ಪ್ರಕಾಶನ : ಅಖಿಲ ಭಾರತ ಮಾಧ್ವ ಮಹಾಮಂಡಲ
ಬೆಂಗಳೂರು - ೨೮.

ಅಕ್ಷರ ಜೋಡಣೆ : ಪದ್ಮಶ್ರೀ ಗ್ರಾಫಿಕ್ಸ್, ಬೆಂಗಳೂರು
ಮುದ್ರಣ : ಬೃಂದಾವನ್ ಪ್ರಿಂಟರ್ಸ್
ಲಾಲ್ ಬಾಗ್ ಫೋರ್ಟ್ ರೋಡ್
ಬೆಂಗಳೂರು ೪

# ಆಶೀರ್ವಚನ

ಶ್ರೀ ಹರಿವಾಯುಸ್ತುತಿಯು ಶ್ರೀಹರಿವಾಯುಗಳ ವಿಶೇಷಾನುಗ್ರಹಾಕಾಂಕ್ಷಿಗಳಿಗ ಮಾತಾಪಿತೃ ಸ್ಥಾನದಲ್ಲಿ ಇದೆ ಸತ್ಪುತ್ರನು ತನ್ನ ಮಾತಾಪಿತೃಗಳನ್ನು ಹೇಗೆ ತ್ಯಾಗಮಾಡಲಾರನೋ ಹಾಗೆಯೇ ಮುಮುಕ್ಷು ಆಗಿರುವವನು ಶ್ರೀ ಹರಿವಾಯುಸ್ತುತಿಯನ್ನು ಬಿಡಲಾರನು ಆ ಸ್ತುತಿಯ ಅರ್ಥ ಜ್ಞಾನಪೂರ್ವಕ ಅದನ್ನು ಪಠನ ಮಾಡಿದರೇನೇ ಅದರ ಪೂರ್ಣಫಲವು ಪ್ರಾಪ್ತವಾಗುವುದು

ಶ್ರೀ ಕೆ ಹಯವದನ ಪುರಾಣಿಕ ಎಂ.ಎ ವಿದ್ವಾನ್ , ಇವರು ಶ್ರೀ ಹರಿವಾಯುಸ್ತುತಿಗೆ ಶ್ರೀ ಹರಿವಾಯುಗಳ ಪರವಾಗಿ ಎರಡು ಅರ್ಥಗಳನ್ನು ಸುಂದರವಾಗಿ ಪ್ರಾಮಾಣಿಕವಾಗಿ ಬರೆದಿದ್ದಾರೆ. ನಾವು ಅದನ್ನು ನೋಡಿ ತುಂಬಾ ಸಂತೋಷಪಟ್ಟಿದ್ದೇವೆ

ಭಕ್ತವರ್ಗಕ್ಕೆ ಇದು ಒಂದು ಶ್ರೇಷ್ಠನಿಧಿರೂಪವಾಗಿದೆ ಯಾವಾಗಲೂ ಈ ಪುಸ್ತಕವನ್ನು ಕೈಯಲ್ಲಿಟ್ಟುಕೊಂಡು ಇದರ ಅರ್ಥವನ್ನು ಮನಸ್ಸಿನಲ್ಲಿ ದೃಢಪಡಿಸಿಕೊಂಡು ಧನ್ಯರಾಗಬೇಕು

**ಶ್ರೀವಿದ್ಯಾಮಾನ್ಯತೀರ್ಥ ಶ್ರೀಪಾದರು**
**ಫಲಿಮಾರು ಭಂಡಾರುಕೇರಿ ಮಠ**
**ಉಡುಪಿ.**

ಶ್ರೀ ಹರಿವಾಯು ಸ್ತುತಿ

(Sri Hari Vayu Stuti)


ಪ್ರಥಮ ಮುದ್ರಣ : ೧೯೮೮

ಮುದ್ರಿತ ಪ್ರತಿಗಳು : ೨೦೦೦

ದ್ವಿತೀಯ ಮುದ್ರಣ : ೧೯೯೫

ಮುದ್ರಿತ ಪ್ರತಿಗಳು : ೧೦೦೦

ಪುಟಗಳು : ೧೨೬

ಬೆಲೆ :



Rights Reserved



ಪ್ರಕಾಶನ : **ಅಖಿಲ ಭಾರತ ಮಾಧ್ವ ಮಹಾಮಂಡಲ**

ಬೆಂಗಳೂರು - ೨೮.

ಅಕ್ಷರ ಜೋಡಣೆ **ಪದ್ಮಶ್ರೀ ಗ್ರಾಫಿಕ್ಸ್ , ಬೆಂಗಳೂರು**

ಮುದ್ರಣ ಬೃಂದಾವನ್ ಪ್ರಿಂಟರ್ಸ್

ಲಾಲ್ ಬಾಗ್ ಫೋರ್ಟ್ ರೋಡ್

ಬೆಂಗಳೂರು ೪

# ಆಶೀರ್ವಚನ

ಶ್ರೀ ಹರಿವಾಯುಸ್ತುತಿಯು ಶ್ರೀಹರಿವಾಯುಗಳ ವಿಶೇಷಾನುಗ್ರಹಾಕಾಂಕ್ಷಿಗಳಿಗೆ ಮಾತಾಪಿತೃ ಸ್ಥಾನದಲ್ಲಿ ಇದೆ. ಸತ್ಪುತ್ರನು ತನ್ನ ಮಾತಾಪಿತೃಗಳನ್ನು ಹೇಗೆ ತ್ಯಾಗಮಾಡಲಾರನೋ ಹಾಗೆಯೇ ಮುಮುಕ್ಷು ಆಗಿರುವವನು ಶ್ರೀ ಹರಿವಾಯುಸ್ತುತಿಯನ್ನು ಬಿಡಲಾರನು. ಆ ಸ್ತುತಿಯ ಅರ್ಥ ಜ್ಞಾನಪೂರ್ವಕ ಅದನ್ನು ಪಠನ ಮಾಡಿದರೇನೇ ಅದರ ಪೂರ್ಣಫಲವು ಪ್ರಾಪ್ತವಾಗುವುದು

ಶ್ರೀ ಕೆ. ಹಯವದನ ಪುರಾಣಿಕ ಎಂ.ಎ ವಿದ್ವಾನ್ , ಇವರು ಶ್ರೀ ಹರಿವಾಯುಸ್ತುತಿಗೆ ಶ್ರೀ ಹರಿವಾಯುಗಳ ಪರವಾಗಿ ಎರಡು ಅರ್ಥಗಳನ್ನು ಸುಂದರವಾಗಿ ಪ್ರಾಮಾಣಿಕವಾಗಿ ಬರೆದಿದ್ದಾರೆ. ನಾವು ಅದನ್ನು ನೋಡಿ ತುಂಬಾ ಸಂತೋಷಪಟ್ಟಿದ್ದೇವೆ.

ಭಕ್ತವರ್ಗಕ್ಕೆ ಇದು ಒಂದು ಶ್ರೇಷ್ಠನಿಧಿರೂಪವಾಗಿದೆ. ಯಾವಾಗಲೂ ಈ ಪುಸ್ತಕವನ್ನು ಕೈಯಲ್ಲಿಟ್ಟುಕೊಂಡು ಇದರ ಅರ್ಥವನ್ನು ಮನಸ್ಸಿನಲ್ಲಿ ದೃಢಪಡಿಸಿಕೊಂಡು ಧನ್ಯರಾಗಬೇಕು.

**ಶ್ರೀವಿದ್ಯಾಮಾನ್ಯತೀರ್ಥ ಶ್ರೀಪಾದರು**
**ಫಲಿಮಾರು ಭಂಡಾರುಕೇರಿ ಮಠ**
**ಉಡುಪಿ.**

**ನವಾರ್ಕಕೋಟಿಸ್ಮಿತಸುಂದರಾಸ್ಯಂ**
**ಸುವರ್ಣಕೌಪೀನಧೃತಂ ಸುಸೌಮ್ಯಂ ।**
**ಪ್ರಬೋಧ ಮುದ್ರಾऽಭಯ ಪದ್ಮಹಸ್ತಂ**
**ಪ್ರಣೌಮಿ ವಿದ್ಯಾಧಿಗಮಾಯ ಮಧ್ವಂ ॥**

ಕೋಟಿ ಬಾಲಸೂರ್ಯರ ಕಾಂತಿ ಸೂಸುವಂಥ ಮಂದಹಾಸದಿಂದ ಕೂಡಿದ ಸುಂದರವಾದ ಮುಖ ಉಳ್ಳವರು ಪೀತಾಂಬರಕೌಪೀನ ಧರಿಸಿರುವವರು ಬಲು ಸೌಮ್ಯರಾಗಿರುವವರು ಜ್ಞಾನಮುದ್ರೆ ಅಭಯಮುದ್ರೆಗಳನ್ನು ಕರಕಮಲಗಳಲ್ಲಿ ತೋರುತ್ತಿರುವವರು - ಇಂಥ ಮಧ್ವರನ್ನು ತತ್ವಜ್ಞಾನ ಸಿದ್ಧಿಗಾಗಿ ಸ್ತುತಿಸುತ್ತೇನೆ

# ಆಶೀರ್ವಚನ

ಶ್ರೀ ಹರಿವಾಯುಸ್ತುತಿಯು ಮಾಧ್ವ ಜನತೆಗೆ ಒಂದು ಮಹಾ ಮಂತ್ರವೆನಿಸಿದೆ. ಶ್ರೀ ತ್ರಿವಿಕ್ರಮಪಂಡಿತಾಚಾರ್ಯರು ರಚಿಸಿದ ಈ ಹರಿವಾಯುಸ್ತುತಿಗೆ ಶ್ರೀಮದಾಚಾರ್ಯರು ನರಸಿಂಹನಖಸ್ತುತಿಯ ಕವಚವನ್ನು ತೊಡಿಸಿದರು ಈ ಅಭೇದ್ಯ ಕವಚಧಾರಿಯಾದ ಈ ಹರಿವಾಯುಸ್ತುತಿ ಮಂತ್ರವು ನಮ್ಮ ಎಲ್ಲಾ ವಿಘ್ನಾದಿ ಶತ್ರುಗಳ ಉಚ್ಚಾಟನೆಗೆ ಸಮರ್ಥವಾಗಿದೆ

ಜಗತ್ತಿನ ಪಿತನೂ ಪತಿಯೂ ಆದ ಶ್ರೀಹರಿಯ ಮತ್ತು ಜಗದ್ಗುರುಗಳಾದ ಮುಖ್ಯಪ್ರಾಣರ ಅನುಗ್ರಹವನ್ನು ನಮ್ಮಲ್ಲಿ ತುಂಬುವ ಈ ಹರಿವಾಯುಸ್ತುತಿಯು ವಿಶಿಷ್ಟ ಶೈಲಿಯ ಕನ್ನಡ ವಿವರಣೆಯನ್ನು ಪೂರ್ಣಪ್ರಜ್ಞ ವಿದ್ಯಾಪೀಠದ ಪ್ರಾಚಾರ್ಯರಾದ ಕೆ ಹಯವದನ ಪುರಾಣಿಕರು ನೀಡಿದ್ದಾರೆ ಪ್ರತಿಯೊಂದು ಶ್ಲೋಕವೂ ವಾಯುದೇವರ ಮಹಿಮೆಯ ಜೊತೆಗೆ ಶ್ರೀಹರಿಯ ಗುಣವರ್ಣನೆಯನ್ನೂ ಮಾಡುವುದೆಂಬುದನ್ನು ತೋರಿಸಿ ವಾಯುದೇವರ ವಿಶೇಷಾನುಗ್ರಹ ಪಾತ್ರರಾಗುವುದರ ಜೊತೆಗೆ ಜಿಜ್ಞಾಸುಗಳಿಗೂ ವಿಶೇಷವಾದ ಜ್ಞಾನಪ್ರಚೋದನೆಯನ್ನೂ ಮಾಡಿದ್ದಾರೆ

ಇದರ ಪ್ರಥಮ ಮುದ್ರಣದ ಪೂರ್ಣ ವೆಚ್ಚವನ್ನು ಪ್ರಸನ್ನ ವಿಟ್ಠಲ ದೇಸಾಯಿ ಅವರು ನಿರ್ವಹಿಸಿದ್ದರು ಪ್ರತಿಗಳು ತೀರಿಹೋಗಿರುವುದರಿಂದ ಇದೀಗ ದ್ವಿತೀಯ ಮುದ್ರಣ ಮಾಡಿಸುತ್ತಿದ್ದೇವೆ ಆಸ್ತಿಕವರ್ಗ ಇದರ ಸದುಪಯೋಗ ಪಡೆಯಲೆಂದು ಆಶಿಸುತ್ತೇವೆ

**- ಶ್ರೀ ವಿಶ್ವೇಶತೀರ್ಥ ಶ್ರೀಪಾದರು**
**ಪೇಜಾವರ ಅಧೋಕ್ಷಜ ಮಠ**
**ಉಡುಪಿ**

# ಪುರಶ್ಚರಣ ಕ್ರಮ

ಪುರಶ್ಚರಣವೆಂದರೆ ಅನೇಕ ಬಾರಿ ಪಠಿಸುವುದ. ಇದು ಅನೇಕ ರೀತಿ. ಅತ್ಯಂತ ಸರಳವಾದ ಒಂದು ರೀತಿ ಇದು - ನಖಸ್ತುತಿಯನ್ನು ಹೇಳಿ, ವಾಯುಸ್ತುತಿಯಲ್ಲಿ ತನಗೆ ಅಭೀಷ್ಟವಾದ ಯಾವುದಾದರೊಂದು ಶ್ಲೋಕದಿಂದಾರಂಭಿಸಿ ಕೊನೆವರೆಗೂ ಹೇಳಿ, ಆದಿಯಿಂದ ಅಂತ್ಯದವರೆಗೆ ಪೂರ್ತಿಯಾಗಿಯೂ ಹೇಳಿ, ನಖಸ್ತುತಿ ಹೇಳುವುದು ಹೀಗೆ ಮಾಡಿದರೆ ಒಂದು ಜಪವಾಗುವುದು. ಇಂಥ ಜಪವನ್ನು ದಿನಕ್ಕೆ ಏಳುಬಾರಿ ಮಾಡಿ ಕೃಷ್ಣಾರ್ಪಣ ಬಿಡಬೇಕು ಹೀಗೆ ಏಳು ದಿನ ಮಾಡಿದರೆ ಒಂದು ಪುರಶ್ಚರಣವಾಗುತ್ತದೆ. ಬಳಿಕ ಅದಕ್ಕೆ ತರ್ಪಣ, ಹೋಮ, ಬ್ರಾಹ್ಮಣಾರಾಧನಗಳನ್ನೂ ಮಾಡಿ ಕೃಷ್ಣಾರ್ಪಣವೆನ್ನಬೇಕು

# ಶ್ರೀ ಹರಿವಾಯು ಸ್ತುತಿ

ವೇದಾಂತದಂತೆ ಭವತಾರಕವೆನಿಸಿದ ಶ್ರೀಹರಿವಾಯುಸ್ತುತಿ ಶ್ರೀಹರಿವಾಯುಗಳ ಅವತಾರತ್ರಯದ ಸಂಕ್ಷಿಪ್ತ ವರ್ಣನಾತ್ಮಕವಾಗಿದ್ದು ಭಕ್ತವರ್ಗಕ್ಕೆ ಅಮೂಲ್ಯವಾದ ನಿಧಿಯಾಗಿದೆ ಅದರ ಅರ್ಥವಿಸ್ತಾರವನ್ನು ತಿಳಿಯದಿದ್ದರೆ ಆ ನಿಧಿ ಇದ್ದೂ ಇಲ್ಲದಂತೆ ಆದ್ದರಿಂದ ಸರಳ ಸುಂದರ ಕನ್ನಡದಲ್ಲಿ ಹರಿವಾಯುಗಳಿಬ್ಬರ ಪರವಾದ ಎರಡು ಅರ್ಥಗಳನ್ನು ಸುಲಭವಾಗಿ ತಿಳಿಸಿ ಕೊಡುವ ಏಕೈಕ ಅಪೂರ್ವ ಕೃತಿ ಇದು

**-ಪ್ರಕಾಶಕರು**

# ಪ್ರಾಸ್ತಾವಿಕ

ಜಗದ್ಗುರು ಶ್ರೀ ಮನ್ಮಧ್ವಾಚಾರ್ಯರು ಒಂದು ದಿನ ಎಂದಿನಂತೆ ಶ್ರೀಕೃಷ್ಣನ ಪೂಜೆ ಮಾಡುತ್ತ ನೈವೇದ್ಯ ಸಮರ್ಪಣೆಗೆ ಕುಳಿತಿದ್ದಾಗ ಶಿಷ್ಯರು ದ್ವಾದಶ ಸ್ತೋತ್ರಗಳನ್ನು ಪಠಿಸಿದರು ಸ್ತೋತ್ರಪಾಠ ಮುಗಿಯಿತು. ನೈವೇದ್ಯ ಸಮರ್ಪಣೆಯ ಕೊನೆಯಲ್ಲಿ ಮಾಡಬೇಕಾಗಿದ್ದ ಘಂಟಾನಾದವನ್ನು ಆಚಾರ್ಯರು ಇನ್ನೂ ಮಾಡುತ್ತಿಲ್ಲ ಏಕೆ ವಿಲಂಬ ? ಆಚಾರ್ಯರು ಏನು ಮಾಡುತ್ತಿರಬಹುದು ? ಎಂಬ ಕುತೂಹಲದಿಂದ ಮುಚ್ಚಿದ್ದ ಬಾಗಿಲನ್ನು ಸ್ವಲ್ಪವೆ ತಳ್ಳಿ ಸಂದಿಯಲ್ಲಿ ಇಣಕಿ ನೋಡಿದರು ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯರು

ಒಳಗಿನ ಅಪೂರ್ವ ದೃಶ್ಯ ಕಂಡು ಆನಂದಾಶ್ಚರ್ಯಗಳಿಂದ ಮೈ ಮರೆತರು ಪಂಡಿತಾಚಾರ್ಯರು ಆಚಾರ್ಯರು ಆಗ ಹನುಮ ಭೀಮ ಮಧ್ವ ರೂಪಗಳಿಂದ ಶ್ರೀ ಕೃಷ್ಣನ ಪೂಜೆ ಮಾಡುತ್ತಿದ್ದರು. ಯಾವ ತಪಸ್ಸಿಗೂ ಲಭ್ಯವಾಗದಂಥ ಈ ಅದ್ಭುತ ದೃಶ್ಯ ಕಂಡು ಪಂಡಿತಾಚಾರ್ಯರು ರೋಮಾಂಚಿತರಾಗಿ ಆನಂದ ಬಾಷ್ಪ ಸುರಿಸುತ್ತ ಗದ್ಗದ ಕಂಠದಿಂದ ಸಹಜವಾಗಿ ಅಪ್ರಯತ್ನವಾಗಿ ಶ್ರೇಷ್ಠ ಕಾವ್ಯ ಶೈಲಿಯಲ್ಲಿ ಶ್ರೀಮದಾಚಾರ್ಯರ ಅವತಾರತ್ರಯವನ್ನೂ ಅವತಾರತ್ರಯ ಸೇವ್ಯವಾದ ಕೃಷ್ಣನ ರೂಪತ್ರಯವನ್ನೂ ಕೊಂಡಾಡಿದರು. ಇದುವೆ ವೈಷ್ಣವರಿಗೆ ತಾರಕ ಮಂತ್ರವೆನಿಸಿದ ನಲವತ್ತೊಂದು ಶ್ಲೋಕಗಳ ಶ್ರೀ ಹರಿ ವಾಯು ಸ್ತುತಿ. ಆಚಾರ್ಯರು ಅದನ್ನು ಕೇಳಿ ಪ್ರಸನ್ನರಾಗಿ ತಾವೆ ನರಸಿಂಹ ನಖಸ್ತುತಿ ರಚಿಸಿ, ಆದ್ಯಂತಗಳಲ್ಲಿ ಸಂಪುಟಾಕಾರವಾಗಿ ಪಠಿಸಿ ಶ್ರೀ ಹರಿ ವಾಯು ಸ್ತುತಿ ಪಠನದ ಪೂರ್ಣ ಫಲವನ್ನು ಸಕಲ ಸಜ್ಜನರೂ ಪಡೆಯಲೆಂದು ಆಜ್ಞೆ ಮಾಡಿದರು

ಸ್ತುತಿಯಲ್ಲಿ ಪ್ರತಿಯೊಂದು ಶ್ಲೋಕಕ್ಕೂ ಪ್ರತ್ಯೇಕ ಫಲಕೊಡುವ ಸಾಮರ್ಥ್ಯ. ಪುರಶ್ಚರಣ ಮಾಡಿದರೆ ಬಹು ಬೇಗನೆ ಅಭೀಷ್ಟ ಸಿದ್ಧಿ.

ಸುಮಾರು ಕ್ರಿ ಶ ೧೨೫೮ ರಿಂದ ೧೩೨೦ರೊಳಗೆ ಜೀವಿಸಿದ್ದ ಪಂಡಿತಾಚಾರ್ಯರು ಹುಟ್ಟಿನಿಂದಲೂ ವರಕವಿಗಳೂ ಉದ್ದಾಮ ಪಂಡಿತರೂ ಆಗಿದ್ದರು

" ಕಲಭಾಷಣ ಏವ ಸೂರಿಪ್ರೋತಃ ಕವಿರಾಸೀದನವದ್ಯಪದ್ಯವಾದೀ "

-ಸುಮಧ್ವ ವಿಜಯ

ಚಿಕ್ಕಂದಿನಲ್ಲಿ ಒಮ್ಮೆ ಒಬ್ಬ ಬೌದ್ಧ ಸನ್ಯಾಸಿ ಇವರ ಮನೆಗೆ ಭಿಕ್ಷೆ ಬೇಡುತ್ತ ಬಂದಾಗ ಅಂಗಳದಲ್ಲಿ ಆಟವಾಡುತ್ತಿದ್ದ ಬಾಲಕ ತ್ರಿವಿಕ್ರಮ ಪಂಡಿತರು ಅಪ್ರಯತ್ನವಾಗಿ ಯಮಕಾಲಂಕಾರದಿಂದ ಕೂಡಿದ ಸರಳ ಸುಂದರ ಸಂಸ್ಕೃತ ಪದ್ಯ ರಚಿಸಿ ಹೇಳಿದರಂತೆ-

ಏಕಃ ಕ್ಷಪಣಕ ಶಾಕಾಹರ್ತಾ ಬಹವಃ ಕ್ಷಪಣಕ ಶಾಕಾದಾನಾಃ ।

ಯತ್ರ ಕ್ಷಪಣಕ ಬಹು ಶಾಕಾದಾಃ ತತ್ರ ಕ್ಷಪಣಕ ಶಾಕಾಶಾ ಕಾ ?

'ನಮ್ಮ ಮನೆಯಲ್ಲಿ ಶಾಕ ಪದಾರ್ಥವನ್ನು ಸಂಪಾದಿಸಿ ತಂದುಹಾಕುವರು ಒಬ್ಬರೆ ಅದನ್ನು ..ಣ್ಣುವ ಮಂದಿ ಬಹಳ. ಆದ್ದರಿಂದ ಗಳಿಸುವವನೊಬ್ಬನೆ ಇದ್ದು ಉಣ್ಣುವವರು ಬಹುಮಂದಿ ಉಳ್ಳ ಈ ಬಡವರ ಮನೆಯಲ್ಲಿ, ಬೌದ್ಧ ಸನ್ಯಾಸಿಯೆ, ನಿನಗ ಶಾಕ ಪದಾರ್ಥದ ಆಶೆ ಏತರದು ?

ಶ್ರೀಮದಾಚಾರ್ಯರ ಪರಿಚಯವಾಗುವ ಮೊದಲಿಗೆ ತ್ರಿವಿಕ್ರಮ ಪಂಡಿತರು ಉದ್ದಾಮ ಪಂಡಿತರೂ ಕವಿಗಳೂ ಆಗಿದ್ದು ಕುಂಬಳೆಯ ರಾಜ ಇಮ್ಮಡಿ ಜಯಸಿಂಹನ ಆಸ್ಥಾನದಲ್ಲಿ ರಾಜಗುರುವಾಗಿದ್ದರು

ಇವರು ಎಳವೆಯಲ್ಲಿಯೇ ಉಷಾಹರಣವೆಂಬ ಒಂಬತ್ತು ಸರ್ಗಗಳ ಪ್ರೌಢ ಸಂಸ್ಕೃತ ಕಾವ್ಯ ಬರೆದು ಕವಿಕುಲ ತಿಲಕರೆಂಬ ಪ್ರಶಂಸೆಗೆ ಪಾತ್ರರಾಗಿದ್ದರು ಇವರ ತಂದೆ ಸುಬ್ರಹ್ಮಣ್ಯ ಪಂಡಿತರು ಆಂಗಿರಸ ಗೋತ್ರದವರು ಅವರಿಗೆ ಮೂರು ಜನ ಗಂಡು ಮಕ್ಕಳು ಅವರಲ್ಲಿ ಹಿರಿಯರು ತ್ರಿವಿಕ್ರಮ ಪಂಡಿತರು

ಇವರು ಅದ್ವೈತ ವೇದಾಂತದ ಸಪಾದ ಲಕ್ಷ ಗ್ರಂಥವನ್ನು ಕರತಲಾಮಲಕವನ್ನಾಗಿ ಮಾಡಿಕೊಂಡು ಪ್ರಸಿದ್ಧ ಮೀಮಾಂಸಾ ಪಂಡಿತನಾದ ಭಾನುಪಂಡಿತನನ್ನು ವಾದದಲ್ಲಿ ಸೋಲಿಸಿ ಪ್ರತಿವಾದಿ ಭಯಂಕರರೆನಿಸಿದ್ದರು ಆಗಿನ ಅದ್ವೈತ ಪಂಡಿತರೆಲ್ಲರೂ ತಮ್ಮ ಸಿದ್ಧಾಂತ ಪ್ರತಿಷ್ಠೆಗೆ ಇವರನ್ನೆ ಅವಲಂಬಿಸಿದ್ದರು

ಆದರೆ ಇವರಿಗೆ ಅದ್ವೈತದಲ್ಲಿ ಪೂರ್ತಿ ನಂಬಿಕೆ ಇರಲಿಲ್ಲ ತೃಪ್ತಿ ಇರಲಿಲ್ಲ. ಅದರಲ್ಲಿ ಅನೇಕ ಲೋಪದೋಷಗಳು ಅವರ ಗಮನಕ್ಕೆ ಬಂದಿದ್ದುವು. ಅವುಗಳನ್ನು ಮುಚ್ಚಿಟ್ಟೇ ಪ್ರತಿವಾದಿಗಳ ಕಣ್ಣಿಗೆ ಮಣ್ಣೆರಚಿ ವಾದಿಸುವ ಕಲೆ ಅವರಿಗೆ ಕರಗತವಾಗಿತ್ತು

ಅದೇ ಕಾಲದಲ್ಲಿ ಶ್ರೀಮದಾಚಾರ್ಯರು ತತ್ವವಾದವನ್ನು ಎಲ್ಲೆಡೆ ಯಶಸ್ವಿಯಾಗಿ ಹರಡುತ್ತಿದ್ದರು ಈ ಸಮಾಚಾರ ಕೇಳಿ ಪಂಡಿತಾಚಾರ್ಯರು ಸ್ವಾಭಾವಿಕವಾಗಿ ಶ್ರೀಮದಾಚಾರ್ಯರ ಗ್ರಂಥಗಳನ್ನು ಅವಲೋಕಿಸಲು ಬಯಸಿದರು ತಮ್ಮ ಕಿರಿಯ ಸೋದರರೆ ಆದ ಶಂಕರ ಪಂಡಿತರು ಆಚಾರ್ಯರ ಗ್ರಂಥ ಪಾಲಕರಾಗಿದ್ದುದರಿಂದ ರಹಸ್ಯವಾಗಿ ಅವರಿಂದ ಆ ಗ್ರಂಥಗಳನ್ನು ತರಿಸಿ ಪ್ರತಿನಿತ್ಯ ರಾತ್ರಿ ಹೊತ್ತು ಅವಲೋಕಿಸಿದರು ಗುಣ ಪಕ್ಷಪಾತಿಗಳಾದ ಅವರು 'ವಿದ್ವಾನೇವ ವಿಜಾನಾತಿ ವಿದ್ವಜ್ಜನ ಪರಿಶ್ರಮಂ' ಎನ್ನುವಂತೆ ಆಚಾರ್ಯರ ಕೃತಿಗಳಲ್ಲಿ ಎದ್ದು ಕಾಣುವ ಆಳವಾದ ಪಾಂಡಿತ್ಯ, ನಿರಾಗ್ರಹದ ಚಿಕಿತ್ಸಕ ಬುದ್ಧಿ, ಸಂಶೋಧನಾ ಸಾಮರ್ಥ್ಯಗಳನ್ನು ಕಂಡು ಮಾರು ಹೋದರು ಆದರೂ ಆಚಾರ್ಯರ ಶಿಷ್ಯತ್ವವಹಿಸಿ ಮತಾಂತರ ಹೊಂದಲು ಮಾತ್ರ ಅವರು ಸಿದ್ಧರಿರಲಿಲ್ಲ ಇದು ವಿಚಾರವಂತರ ಲಕ್ಷಣ ಇನ್ನೂ ವಿಮರ್ಶೆ ಮಾಡಬೇಕು ಎಲ್ಲ ಸಂಶಯಗಳನ್ನು ಪರಿಹರಿಸಿಕೊಳ್ಳಬೇಕು ಎಂದುಕೊಂಡರು

ಸಮಕಾಲೀನ ಅದ್ವೈತಪಂಡಿತರೆಲ್ಲರೂ ಪಂಡಿತಾಚಾರ್ಯರ ಬಳಿಗೆ ಬಂದು 'ತಾವು ಆ ಆಚಾರ್ಯರೊಡನೆ ಒಮ್ಮೆ ವಾದಮಾಡಿ ತತ್ವವಾದ ತಲೆ ಎತ್ತದಂತೆ ಮಾಡಬೇಕು ಅದ್ವೈತದ ಘನತೆ ಪ್ರತಿಷ್ಠೆಗಳನ್ನು ಉಳಿಸಬೇಕು' ಎಂದು ಮೇಲಿಂದ ಮೇಲೆ ಆಗ್ರಹಪೂರ್ವಕ ಒತ್ತಾಯವನ್ನು ಮಾಡುತ್ತಿದ್ದರು 'ನೀವೆ ಸುಮ್ಮನಿದ್ದರೆ ನಮಗಿನ್ನಾರು ಗತಿ?' ಎಂದು ಅಂಗಲಾಚಿ ಬೇಡುತ್ತಿದ್ದರು ಆದ್ದರಿಂದ

ಪಂಡಿತಾಚಾರ್ಯರು ಆಚಾರ್ಯರನ್ನು ಸಾಕ್ಷಾತ್ತಾಗಿ ಕಂಡು ಪ್ರವಚನ ಕೇಳಲು ತೊಡಗಿದರು

ಒಂದು ದಿನ ಆಚಾರ್ಯರು ಪಾಡಿಕುಡೇಲ್ ಎಂಬ ಗ್ರಾಮದ ದೇವಾಲಯ ಒಂದರಲ್ಲಿ ಸೂತ್ರಭಾಷ್ಯ ಪ್ರವಚನ ಮಾಡುತ್ತಿದ್ದರು ತಮ್ಮ ಮುಂದೆ ಶ್ರೋತೃಗಳಲ್ಲಿ ಒಬ್ಬರಾಗಿ ತ್ರಿವಿಕ್ರಮಪಂಡಿತರು ಕುಳಿತಿದ್ದುದನ್ನ ಕಂಡು ಹೆಚ್ಚಿನ ಉತ್ಸಾಹದಿಂದ ಆಚಾರ್ಯರು ಹರಿಸರ್ವೋತ್ತಮತ್ವವನ್ನು ಯುಕ್ತಿ ಯುಕ್ತವಾಗಿ ಶ್ರುತಿ ಸ್ಮೃತಿ ವಚನಗಳ ಆಧಾರದಿಂದ ಸಾಧಿಸುತ್ತ ಅಮೋಘವಾದ ಉಪನ್ಯಾಸ ಮಾಡಿದರು ಆಚಾರ್ಯರ ಉಪನ್ಯಾಸವಾಣಿ ಗಂಗಾ ಪ್ರವಾಹದಂತೆ ಅಡೆತಡೆ ಇಲ್ಲದೆ ಹರಿದು ಬಂದಿತ್ತು ಆ ಪ್ರವಾಹದ ರಭಸಕ್ಕೆ ಸಕಲ ದುರ್ಮತಗಳೂ ಕೊಚ್ಚಿಹೋದವು

ಅದ್ವಿತೀಯ ವಿದ್ವಾಂಸರಾದ ಯುಕ್ತಿ ಶೂರರೆನಿಸಿದ ತ್ರಿವಿಕ್ರಮ ಪಂಡಿತರು ಆಚಾರ್ಯರ ಮುಂದೆ ವಾದಕ್ಕೆ ಕುಳಿತು ಬಲವಾದ ಯುಕ್ತಿಗಳಿಂದ ಅವರ ಸಿದ್ಧಾಂತವನ್ನು ಖಂಡಿಸತೊಡಗಿದರು ಆಚಾರ್ಯರು ಇನ್ನೂ ಹೆಚ್ಚು ಬಲವಾದ ಯುಕ್ತಿಗಳಿಂದ ಅವರ ಯುಕ್ತಿಗಳನ್ನು ನಿರಾಕರಿಸಿದರು ಪಂಡಿತರು ತಮ್ಮ ಪಕ್ಷಕ್ಕೆ ಅನುಕೂಲವಾಗಿ ಅನೇಕ ಪ್ರಬಲ ಶ್ರುತಿವಾಕ್ಯಗಳ ಆಧಾರ ತೋರಿಸಿದರು ಪ್ರತಿವಾದಿಗಳಿಗೆ ತಮ್ಮ ಪಕ್ಷಕ್ಕೆ ಅನೂಕೂಲವಾಗಿ ತಿರುಗಿಸಿಕೊಳ್ಳಲಾಗದಂಥ ಶ್ರುತಿವಾಕ್ಯಗಳನ್ನು ಅವರು ಮುಂದಿಟ್ಟದ್ದರು ಆದರೆ ಆಚಾರ್ಯರು ಮಾತ್ರ ಲೀಲಾಜಾಲವಾಗಿ ಇನ್ನೂ ಹೆಚ್ಚು ಪ್ರಬಲವಾದ ವಿರೋಧಿ ಶ್ರುತಿವಾಕ್ಯಗಳ ಸಹಾಯದಿಂದ ಅವುಗಳನ್ನು ತಮ್ಮ ಪಕ್ಷಕ್ಕೇ ಅನುಕೂಲವಾಗುವಂತೆ ವ್ಯಾಖ್ಯಾನಿಸಿದರು ಯಾವ ಬಲಾತ್ಕಾರವೂ ಇಲ್ಲದಂತೆ ಸಮಂಜಸವಾಗಿ ತಮ್ಮ ಸಿದ್ಧಾಂತಕ್ಕೆ ಅನುಗುಣವಾದ ಅರ್ಥವನ್ನು ಆ ಶ್ರುತಿಗಳಿಗೆ ಹೇಳಿದರು

ಈ ವಾದ ವಿವಾದಗಳು ಹದಿನೈದು ದಿನಗಳ ಕಾಲ ಬಿರುಸಿನಿಂದ ನಡದವು ಯಾರೂ ಒಬ್ಬರನ್ನೊಬ್ಬರು ಬಿಟ್ಟು ಕೊಡುತ್ತಿರಲಿಲ್ಲ

ಕೊನೆಯಲ್ಲಿ ತ್ರಿವಿಕ್ರಮ ಪಂಡಿತರೆ ಸೋತು ಶರಣಾದರು ಅವರಿಗೆ ತಮ್ಮ ಪಕ್ಷವನ್ನು ಎತ್ತಿ ನಿಲ್ಲಿಸಲೂ ಆಗಲಿಲ್ಲ ಆಚಾರ್ಯರ ಪಕ್ಷವನ್ನು ಉರುಳಿಸಲೂ ಆಗಲಿಲ್ಲ

ಸಾತ್ವಿಕ ಚೇತನರಾದ್ದರಿಂದ ಈ ಸೋಲನ್ನು ಸಂತೋಷದಿಂದಲೆ ಒಪ್ಪಿಕೊಂಡರು ಸೋಲಿನಲ್ಲಿಯೆ ಗೆಲುವಿನ ಸುಖ ಕಂಡು ಕೊಂಡರು ತಾನು ಧನ್ಯನಾದೆನೆಂದುಕೊಂಡರು ಆನಂದ ಬಾಷ್ಪ ಸುರಿಸಿದರು ಇಷ್ಟು ದಿನವಾದ ಮಾಡಿದ್ದಕ್ಕೆ ಕ್ಷಮೆ ಇರಲಿ ಎಂದು ಬೇಡಿಕೊಂಡರು ತಮ್ಮ ಚರಣ ಧೂಳಿಯ ಸೇವಕನಾಗುವೆನೆಂದರು

ಆಚಾರ್ಯರು ಪ್ರೀತಿಯಿಂದ ಅವರಿಗೆ ತಪ್ತ ಮುದ್ರಾಧಾರಣ ಪೂರ್ವಕ ವೈಷ್ಣವ ದೀಕ್ಷೆ ನೀಡಿ ಸೂತ್ರಭಾಷ್ಯ ಪಾಠ ಹೇಳಿದರು ಕೊನೆಯಲ್ಲಿ ಸೂತ್ರಭಾಷ್ಯಕ್ಕೆ ಟೀಕೆ ಬರೆಯುವಂಥ ಮಹಾ ಸೇವಾಕಾರ್ಯವನ್ನು ಅವರಿಗೆ ಒಪ್ಪಿಸಿ ಪರಮಾನುಗ್ರಹ ಮಾಡಿದರು

ಇದರ ಫಲವಾಗಿ ತ್ರಿವಿಕ್ರಮ ಪಂಡಿತರ ತತ್ವಪ್ರದೀಪವೆಂಬ ಟೀಕೆಯ ಪ್ರಾದುರ್ಭಾವವಾಯಿತು ಭಾಷ್ಯದಲ್ಲಿ ಗರ್ಭಿತವಾದ ಅರ್ಥಗಳು ಅಪರಿಮಿತ ಅವುಗಳಲ್ಲಿ ಒಂದನ್ನಾದರೂ ಸ್ವಲ್ಪವಾಗಿ ಹೇಳಬೇಕೆಂದಿದ್ದೇನೆ' ಎಂದು ಆರಂಭದಲ್ಲಿ ಹೇಳಿ ಕೊನೆಯಲ್ಲಿ 'ನಾನು ಭಾಷ್ಯದ ಎಲ್ಲ ವಾಕ್ಯಗಳ ಅರ್ಥ ಹೇಳಿಲ್ಲ, ನನ್ನನ್ನು ಸೋಮಾರಿ ಎಂದು ತಿಳಿಯುವುದಾದರೆ ತಿಳಿಯಿರಿ ಆದರೆ ಗುರುಗಳ ಆಜ್ಞೆಯಂತೆ ಬರೆದ ಟೀಕೆ ಎಂದು ಅದಕ್ಕೆ ಒಂದು ಉತ್ತಮಸ್ಥಾನ ಸಿಗಲಿ ಗುರುಗಳ ಅನುಗ್ರಹದಿಂದ ' ಎಂದಿದ್ದಾರೆ

ಇವರು ಶ್ರೀ ಹರಿ ವಾಯು ಸ್ತುತಿಯನ್ನು ಮಾತ್ರವಲ್ಲದೆ ವಿಷ್ಣುಸ್ತುತಿ ಎಂಬ ಸುಂದರಕೃತಿಯನ್ನೂ ರಚಿಸಿರುವರು

ಶ್ರೀ ತ್ರಿವಿಕ್ರಮ ಪಂಡಿತಚಾರ್ಯರ ಮನೆತನವಿಡೀ ಶ್ರೀಮನ್ಮಧ್ವಾಚಾರ್ಯರಿಗೆ ಅನುಪಮ ಸೇವೆ ಮಾಡಿ ಧನ್ಯತೆಯನ್ನು ಪಡೆದ ಮನೆತನ ಆಚಾರ್ಯರ ಗ್ರಂಥಭಂಡಾರದ ಪಾಲಕರಾದ ಶಂಕರಪಂಡಿತರು ಇವರ ತಮ್ಮಂದಿರು ಇವರು ಕೇವಲ ಗ್ರಂಥ ಪಾಲಕರಾಗಿರದೆ ಪ್ರಾಚೀನ ಟೀಕಾಕಾರರ

ಪಂಕ್ತಿಗೆ ಸೇರಿದವರಾಗಿದ್ದು ಶ್ರೀಮದಾಚಾರ್ಯರ ಅನುವ್ಯಾಖ್ಯಾನಕ್ಕೆ 'ಸಂಬಂಧ ದೀಪಿಕಾ' ಎಂಬ ಟೀಕೆ ಬರೆದಿದ್ದಾರೆ

ಅನುವ್ಯಾಖ್ಯಾನಕ್ಕೆ ' ನಯಚಂದ್ರಿಕೆ ' ಎಂಬ ಟೀಕೆಯನ್ನೂ ವಿಷ್ಣುತತ್ವನಿರ್ಣಯಕ್ಕೆ 'ತತ್ವಮಂಜರೀ' ಎಂಬ ಟೀಕೆಯನ್ನೂ ಸುಮಧ್ವ ವಿಜಯ ಮಹಾಕಾವ್ಯ, ಪ್ರಮೇಯ ನವಮಾಲಿಕಾ (ಅಣು ಮಧ್ವ ವಿಜಯ) ಮಣಿಮಂಜರೀ ಎಂಬ ಮೂರು ಕೃತಿಗಳಲ್ಲಿ ಶ್ರೀಮದಾಚಾರ್ಯರ ಚರಿತ್ರೆಯನ್ನೂ ಸಂಗ್ರಹ ರಾಮಾಯಣ, ಪಾರಿಜಾತ ಹರಣ ಕಾವ್ಯ, ಶುಭೋದಯ, ಯೋಗ ದೀಪಿಕಾ ಮುಂತಾದ ಕೃತಿರತ್ನಗಳನ್ನೂ ನರಸಿಂಹ ಸ್ತುತಿ ಶಿವಸ್ತುತಿ ಮುಂತಾದ ಸ್ತೋತ್ರಗಳನ್ನೂ ರಚಿಸಿ ಮಾಧ್ವ ಜನತೆ ಎಂದೂ ಚಿರಋಣಿಯಾಗುವಂತೆ ಮಾಡಿದ ಶ್ರೀ ನಾರಾಯಣಪಂಡಿತಾಚಾರ್ಯರು ತ್ರಿವಿಕ್ರಮ ಪಂಡಿತರ ಮೂವರು ಮಕ್ಕಳಲ್ಲಿ ಕೊನೆಯವರು

ತಾರತಮ್ಯ ಸ್ತೋತ್ರ ಮುಂತಾದ ಸ್ತೋತ್ರ ಕೃತಿಗಳನ್ನು ರಚಿಸಿರುವ ಕಲ್ಯಾಣೀದೇವಿ ತ್ರಿವಿಕ್ರಮಪಂಡಿತರ ಹಿರಿಯ ಸೋದರಿ ಅವರು ಭಾರತೀ ದೇವಿಯ ಚಂದ್ರಾರೂಪದ ಅವತಾರಭೂತರು ಆಚಾರ್ಯರು ಸಂನ್ಯಾಸಿಗಳಾದುದರಿಂದ ದೇವಿ ತಾನೂ ಅವಿವಾಹಿತಳಾಗಿ ಇರಬೇಕೆಂದೇ ಅವಿವಾಹಿತ ವೃದ್ಧ ಕನ್ಯೆಯಾಗಿ ಉಳಿಯಲು ಅವಕಾಶವಿರುವಂಥ ಕೇರಳ ದೇಶದಲ್ಲಿ ಅವತರಿಸಿರಬಹುದು ತ್ರಿವಿಕ್ರಮ ಪಂಡಿತರನ್ನು ಮಗನಂತೆ ಪ್ರೀತಿಯಿಂದ ನೋಡಿಕೊಂಡಿದ್ದರು

ಈ ಪರಂಪರೆಯಲ್ಲಿಯೆ ಬಂದ ವಾಮನ ಪಂಡಿತರು ತ್ರೈವಿಕ್ರಮಾರ್ಯದಾಸ ಎಂಬ ಹೆಸರಿನಿಂದ ಈಶ, ಕೇನ, ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯ ಎಂಬ ಆರು ಉಪನಿಷತ್ತುಗಳಿಗೆ ಅಪೂರ್ವವಾದ ಟೀಕೆ ಬರೆದಿದ್ದಾರೆ ಹೀಗೆ ಈ ಪರಂಪರೆ ಶ್ರೀಮದಾಚಾರ್ಯರಿಗೆ ಸಲ್ಲಿಸಿರುವ ಸೇವೆ ಅನುಪಮವಾದುದು

ಆಚಾರ್ಯರು ತ್ರಿವಿಕ್ರಮ ಪಂಡಿತರಿಗೆ ಲಕ್ಷ್ಮೀನಾರಾಯಣ ವಿಗ್ರಹವನ್ನಿತ್ತು ಮುದ್ರಾಧಾರಣ ಮಾಡಿಸುವ ಅಧಿಕಾರವನ್ನು ಕೊಟ್ಟಿದ್ದರು ಶಂಕರ ಪಂಡಿತರಿಗೂ

ಲಕ್ಷ್ಮೀನರಸಿಂಹ ವಿಗ್ರಹವನ್ನಿತ್ತಿದ್ದರು ಈಗಲೂ ಕಾಣಿಯೂರು ಮಠವಲ್ಲಿ ಈ ಲಕ್ಷ್ಮೀನರಸಿಂಹ ವಿಗ್ರಹವಿದೆ ತ್ರಿವಿಕ್ರಮ ಪಂಡಿತರ ಲಕ್ಷ್ಮೀನಾರಾಯಣ ವಿಗ್ರಹ ಅವರ ಮನೆಯಾದ ಕಾಸರಗೋಡಿನ ಕಾವು ಮಠದಲ್ಲಿ ಇದೆ ಕೇರಳದಲ್ಲಿ ಬ್ರಾಹ್ಮಣರ ಮನೆಯನ್ನು 'ಮಠಶ್ಛಾತ್ರಾದಿ ನಿಲಯಃ' ಎಂಬಂತೆ ಮಠವೆಂದು ಕರೆಯುವ ರೂಢಿ ಇರುವುದರಿಂದ ಕಾವು ಗ್ರಾಮದಲ್ಲಿರುವ ಈ ಮನೆ ಕಾವು ಮಠವೆನಿಸಿದೆ

ಶ್ರೀ ಹರಿ ವಾಯುಂ ಸ್ತುತಿಗೆ ಅನೇಕ ವ್ಯಾಖ್ಯಾನಗಳಿವೆ, ವೇದಾತ್ಮ ಯತಿಗಳು, ವೇದಾಂಗತೀರ್ಥರು, ವಿಶ್ವಪತಿತೀರ್ಥರು, ಬಿದರಹಳ್ಳಿ ಶ್ರೀನಿವಾಸತೀರ್ಥರು ಛಲಾರಿ ಶೇಷಾಚಾರ್ಯರು ಮುಂತಾದವರು ವ್ಯಾಖ್ಯಾನ ಬರೆದಿದ್ದಾರೆ ಇವರಲ್ಲೆಲ್ಲ ಅತ್ಯಂತ ಪ್ರಾಚೀನರಾದ ವೇದಾತ್ಮ ಯತಿಗಳು,

> ವ್ಯಾಖ್ಯಾನಚ್ಛದ್ಮನಾ ಮುಖ್ಯಪ್ರಾಣ ಸದ್ಗುಣ ಚಿಂತನಾಂ ।
> ಕರೋಮ್ಯಾಲೋಚ್ಯ ಪೂರ್ವೇಷಾಂ ವ್ಯಾಖ್ಯಾನಂ ಬುದ್ಧಿಶುದ್ಧಯೇ ॥

'ಪ್ರಾಚೀನರ ವ್ಯಾಖ್ಯಾನಗಳನ್ನು ಅಧ್ಯಯನ ಮಾಡಿ ಈ ವ್ಯಾಖ್ಯಾನ ರಚಿಸುವ ನೆವದಿಂದ ಮುಖ್ಯಪ್ರಾಣನ ಮಹಿಮೆಯನ್ನು ಉಪಾಸನೆ ಮಾಡುತ್ತೇವೆ', ಎನ್ನುತ್ತ ತಮಗಿಂತ ಪ್ರಾಚೀನರು ಅನೇಕರು ಶ್ರೀ ಹರಿ ವಾಯು ಸ್ತುತಿ ವ್ಯಾಖ್ಯಾನಗಳನ್ನು ರಚಿಸಿದ್ದರೆಂಬುದನ್ನು ಭಂಗ್ಯಂತರದಿಂದ ಹೇಳಿದ್ದಾರೆ.

ಪ್ರಾಚೀನ ವ್ಯಾಖ್ಯಾನಕಾರರು ಶ್ರೀ ಹರಿ ವಾಯು ಸ್ತುತಿಗೆ ವಾಯುಪರವಾದ ಒಂದು ಅರ್ಥ ವಿವರಿಸಿದ್ದರೂ ಇತ್ತೀಚಿನವರಾದ ಪುಂಗನೂರಿನ ಶ್ರೀರಾಘವೇಂದ್ರಾಚಾರ್ಯರು ಕನ್ನಡದಲ್ಲಿ ಹರಿ ವಾಯು ಉಭಯ ಪರವಾದ ಪ್ರೌಢವಾದ ವ್ಯಾಖ್ಯಾನ ಮಾಡಿರುವರು, ಅದು ಪಂಡಿತರಿಗೆ ಮಾತ್ರ ಎಟಕುವಂಥ ಶೈಲಿಯಲ್ಲಿ ಇರುವುದರಿಂದ ಅಲ್ಪ ಸಂಸ್ಕೃತ ಜ್ಞಾನ ಉಳ್ಳವರಿಗೂ ತಿಳಿಯುವಂತೆ ಬೇರೆಯೇ ರೀತಿಯಲ್ಲಿ ಸರಳವಾಗಿ ಎರಡು ಅರ್ಥಗಳನ್ನು ತೋರಿಸುವ ನನ್ನ ಈ ಪ್ರಯತ್ನವನ್ನು ಶ್ರೀ ಹರಿ ವಾಯು ಭಕ್ತರೆಲ್ಲರೂ ಆದರಿಸುವರೆಂದು ನಂಬಿದ್ದೇನೆ

ಈ ಹೊತ್ತಿಗೆಗೆ ಆಶೀರ್ವಚನವನ್ನು ನೀಡಿದ ಪರಮಪೂಜ್ಯ ಗುರುವರ್ಯರುಗಳಾದ ಶ್ರೀಫಲಿಮಾರು ಭಂಡಾರಕೇರಿ ಶ್ರೀಪಾದರಿಗೂ,

ಶ್ರೀಪೇಜಾವರಮಠದ ಹಿರಿಯ ಶ್ರೀಪಾದರಿಗೂ ಭಕ್ತಿಪೂರ್ವಕ ಅನಂತ ಸಾಷ್ಟಾಂಗ ನಮನಗಳು.

ಈ ಗ್ರಂಥ ಪ್ರಕಾಶನಕ್ಕೆ ಪೂರ್ಣ ಆರ್ಥಿಕಸಹಾಯ ನೀಡಿರುವ ಶ್ರೀ ಪ್ರಸನ್ನ ವಿಠ್ಠಲ ದೇಸಾಯಿ ಇವರಿಗೂ ಇದರ ಮುದ್ರಣಕಾರ್ಯವನ್ನು ಅಂದವಾಗಿ ಅಚ್ಚುಕಟ್ಟಾಗಿ ನಿರ್ವಹಿಸಿರುವ ಬೃಂದಾವನ್ ಪ್ರಿಂಟರ್ಸ ಮಾಲಿಕರಾದ ಶ್ರೀ ಎಮ್ ಹೆಚ್ ಕೌಜಲಗಿಯವರಿಗೂ ಶ್ರೀ ಹರಿ ವಾಯುಗಳ ಪೂರ್ಣಾನುಗ್ರಹ ದೊರಕಲೆಂದು ಆಶಿಸುತ್ತೇನೆ

ಮಾರ್ಗಶಿರ ಶುದ್ಧ ದಶಮಿ

ದಿನಾಂಕ ೧೮-೧೨-೧೯೮೮

ಕೆ ಹಯವದನ ಪುರಾಣಿಕ

# ಶ್ರೀ ನರಸಿಂಹ ನಖಸ್ತುತಿ

-೧-

ಹರಿಃ ಓಂ । ಪಾಂತ್ವಸ್ಮಾನ್ ಪುರುಹೂತವೈರಿಬಲವನ್-
ಮಾತಂಗಮಾದ್ಯದ್ಘಟಾ-
ಕುಂಭೋಚ್ಚಾದ್ರಿವಿಪಾಟನಾಧಿಕಪಟು-
ಪ್ರತ್ಯೇಕವಜ್ರಾಯಿತಾಃ ।
ಶ್ರೀಮತ್ಕಂಠೀರವಾಸ್ಯ ಪ್ರತತ ಸುನಖರಾ
ದಾರಿತಾರಾತಿದೂರ
ಪ್ರಧ್ವಸ್ತಧ್ವಾಂತಶಾಂತ-
ಪ್ರವಿತತಮನಸಾ ಭಾವಿತಾ ಭೂರಿಭಾಗ್ಯೈಃ ॥

**ಪ್ರತತ** - ವ್ಯಾಪ್ತನಾದ **ಶ್ರೀಮತ್ಕಂಠೀರವಾಸ್ಯ** - ಲಕ್ಷ್ಮೀಸಮೇತನಾದ ನರಸಿಂಹನೇ **ಪುರುಹೂತ** - ದೇವೇಂದ್ರನ **ವೈರಿ** - ವೈರಿಗಳಾದ ಅಸುರರೆಂಬ **ಬಲವತ್** - ಬಲಿಷ್ಠವಾದ **ಮಾತಂಗ** - ಆನೆಗಳ **ಮಾದ್ಯತ್** - ಮದಿಸಿದ **ಘಟಾ** ಹಿಂಡಿನ **ಕುಂಭ** - ಕುಂಭಸ್ಥಳವೆಂಬ **ಉಚ್ಚಾದ್ರಿ** - ಉನ್ನತ ಪರ್ವತಗಳನ್ನು **ವಿಪಾಟನ** - ಸೀಳುವುದರಲ್ಲಿ **ಅಧಿಕಪಟು** - ಅತ್ಯಂತ ಸಮರ್ಥವಾದ **ಪ್ರತ್ಯೇಕ** - ಪ್ರತಿಯೊಂದೂ **ವಜ್ರಾಯಿತಾಃ**- ವಜ್ರಾಯುಧದಂತಿರುವ **ದಾರಿತ** - ನಾಶ ಮಾಡಲ್ಪಟ್ಟ **ಅರಾತಿ**- ಅರಿಷಡ್ವರ್ಗವುಳ್ಳ **ದೂರ ಪ್ರಧ್ವಸ್ತ** - ಅನಾದಿಕಾಲ ದಿಂದಲೂ ಪೂರ್ಣವಾಗಿ ಪರಿಹೃತವಾದ **ಧ್ವಾಂತ** - ಅಜ್ಞಾನವೆಂಬ ಕತ್ತಲುಳ್ಳ **ಶಾಂತ** - ವಿಷ್ಣುವಿನಲ್ಲಿ ನಿಷ್ಠೆಯಿಂದಿರುವ **ಪ್ರವಿತತ** - ವಿಷ್ಣುವಿನ ಗುಣಕರ್ಮಾದಿ ಬಹುವಿಷಯಗಳನ್ನು ತುಂಬಿಸಿಕೊಳ್ಳುವಷ್ಟು ವಿಶಾಲವಾದ **ಮನಸಾ** - ಅಂತಃಕರಣದಿಂದ **ಭೂರಿಭಾಗ್ಯೈಃ** - ಮಹಾಭಾಗ್ಯಶಾಲಿಗಳಾದ ಬ್ರಹ್ಮಾದಿ ದೇವತೆಗಳಿಂದ **ಭಾವಿತಾಃ** - ಧ್ಯಾನಿಸಲ್ಪಟ್ಟ **ಸುನಖರಾಃ** - ನಿನ್ನ ಉತ್ತಮ ನಖಗಳು **ಅಸ್ಮಾನ್** - ನಮ್ಮನ್ನು **ಪಾಂತು** - ರಕ್ಷಿಸಲಿ

ವ್ಯಾಪ್ತನಾದ ಲಕ್ಷ್ಮೀಸಮೇತನಾದ ನರಸಿಂಹನೇ, ನಿನ್ನ ಆ ಉತ್ತಮ ನಖಗಳು ನಮ್ಮನ್ನೂ ನಮ್ಮವರನ್ನೂ ರಕ್ಷಿಸುತ್ತಿರಲಿ ಸಿಂಹವು ಬಲಿಷ್ಠವಾದ ಮದ್ದಾನೆಗಳ ಹಿಂಡನ್ನು ಆಕ್ರಮಿಸಿ ಅವುಗಳ ಕುಂಭಸ್ಥಳಗಳನ್ನು ಉಗುರುಗಳಿಂದ ಸೀಳುತ್ತದೆ ವಜ್ರಾಯುಧವು ಉನ್ನತ ಪರ್ವತಗಳನ್ನು ಒಡೆಯುತ್ತದೆ ಹಾಗೆ ಬ್ರಹ್ಮರುದ್ರಾದಿಗಳ ವರಬಲದಿಂದ ಕೊಬ್ಬಿದ ಅಸುರರೆಲ್ಲರ ಎದೆಗುಂಡಿಗೆಯನ್ನೂ ಶ್ರೀನರಸಿಂಹನ ಕೈಯ ಪ್ರತಿ ಒಂದು ಉಗುರೂ ಕೂಡ ಲೀಲಾಜಾಲವಾಗಿ ಒಡೆಯಬಲ್ಲದು ಹೀಗೆ ಲೋಕದ ಅನಿಷ್ಟಗಳನ್ನು ಪರಿಹಾರ ಮಾಡುವ ಈ ಉಗುರುಗಳನ್ನು ದೇವತೆಗಳು ತಮ್ಮ ಅಂತಃಕರಣದಲ್ಲಿ ಧ್ಯಾನಿಸುತ್ತಾರೆ ಅವರ ಅಂತಃಕರಣ ಈ ಧ್ಯಾನದ ಬಲದಿಂದ ಕಾಮಾದಿ ಅರಿಷಡ್ವರ್ಗಗಳಿಂದ ಮುಕ್ತವಾಗಿದ್ದು, ಅಜ್ಞಾನದ ಕತ್ತಲೆಯನ್ನೂ ಪರಿಹರಿಸಿ ಕೊಂಡು, ಪ್ರಶಾಂತವಾಗಿದ್ದು, ಭಕ್ತಿಯಿಂದ ಪರಮಾತ್ಮನ ಗುಣಕರ್ಮಾದಿ ಬಹುವಿಷಯಗಳನ್ನು ಚಿಂತಿಸುವಷ್ಟು ವಿಶಾಲವೂ ಆಗಿರುತ್ತದೆ

ಈ ಪದ್ಯ ಉಪಜಾತಿವೃತ್ತದಲ್ಲಿದೆ ನರಸಿಂಹನಲ್ಲಿ ಹೇಗೆ ನರ ಮತ್ತು ಸಿಂಹಗಳ ವಿಲಕ್ಷಣವಾದ ಎರಡು ಆಕಾರಗಳು ಜೊತೆ ಸೇರಿರುವುವೋ ಹಾಗೆ ಅವನ ಈ ಸ್ತುತಿಯಲ್ಲಿ ಶಾರ್ದೂಲವಿಕ್ರೀಡಿತ ಮತ್ತು ಸ್ರಗ್ಧರಾ ಎಂಬ ವಿಲಕ್ಷಣವಾದ ಎರಡು ವೃತ್ತಗಳು ಒಂದುಗೂಡಿವೆ ಪೂರ್ವಾರ್ಧದಲ್ಲಿ ಶಾರ್ದೂಲ ವಿಕ್ರೀಡಿತ ಉತ್ತರಾರ್ಧದಲ್ಲಿ ಸ್ರಗ್ಧರೆ ಹಿರಣ್ಯಕಶಿಪುವಿನ ಮೇಲೆ ಹುಲಿಯಂತೆ ಹಾರಿ ಅವನ ಹೊಟ್ಟೆ ಬಗಿದುದು ಪೂರ್ವಾರ್ಧದಲ್ಲಿ ವರ್ಣಿತವಾದುದರಿಂದ ಅದಕ್ಕೆ ಅನುಗುಣವಾಗಿ ಅಲ್ಲಿ ಶಾರ್ದೂಲವಿಕ್ರೀಡಿತವಿದೆ - 'ಶಾರ್ದೂಲ' ಹುಲಿಯ 'ವಿಕ್ರೀಡಿತ' ಕ್ರೀಡೆ ಉತ್ತರಾರ್ಧದಲ್ಲಿ ಕರುಳಿನ ಮಾಲೆ ಧರಿಸಿದ ನೃಸಿಂಹಮೂರ್ತಿಯನ್ನು ದೇವತೆಗಳು ಧ್ಯಾನ ಮಾಡಿದರೆಂಬ ಅಭಿಪ್ರಾಯವಿರುವುದರಿಂದ 'ಸ್ರಗ್ ಧರಾ' ವೃತ್ತ - 'ಸ್ರಗ್' ಮಾಲೆಯನ್ನು 'ಧರಾ' ಧರಿಸಿದ್ದು

'ಭೂರಿ ಭಾಗ್ಯೈಃ' ಎಂಬಲ್ಲಿ 'ನಾಕಿ ವೃಂದೈಃ' ಎಂದೂ ಪಾಠಾಂತರವಿದೆ 'ದೇವತೆಗಳ ಸಮೂಹಗಳಿಂದ' ಎಂದರ್ಥ

-೨-

**ಲಕ್ಷ್ಮೀಕಾಂತ ಸಮಂತತೋಽಪಿ ಕಲಯನ್**
**ನೈವೇಶಿತುಸ್ತೇ ಸಮಂ**
**ಪಶ್ಯಾಮ್ಯುತ್ತಮವಸ್ತು ದೂರತರತೋಽ**
**ಪಾಸ್ತಂ ರಸೋ ಯೋಽಷ್ಟಮಃ ।**
**ಯದ್ರೋಷೋತ್ಕರದಕ್ಷನೇತ್ರಕುಟಿಲ-**
**ಪ್ರಾಂತೋತ್ಥಿತಾಗ್ನಿಸ್ಫುರತ್-**
**ಖದ್ಯೋತೋಪಮವಿಷ್ಫುಲಿಂಗಭಸಿತಾ**
**ಬ್ರಹ್ಮೇಶಶಕ್ರೋತ್ಕರಾಃ ॥**

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತಾ
ಶ್ರೀ ನರಸಿಂಹ ನಖಸ್ತುತಿಃ ಸಮಾಪ್ತಾ ॥

**ಲಕ್ಷ್ಮೀಕಾಂತ** - ಲಕ್ಷ್ಮೀರಮಣನಾದ ನರಸಿಂಹನೇ, **ಬ್ರಹ್ಮ** - ಪೂರ್ವಕಲ್ಪದ ಅನೇಕ ಬ್ರಹ್ಮರು **ಈಶ**-ಅನೇಕರುದ್ರರು **ಶಕ್ರ**-ಅನೇಕ ಇಂದ್ರರು ಮುಂತಾದವರ **ಉತ್ಕರಾಃ**-ಸಮೂಹಗಳು **ಯದ್**-ಯಾರ **ರೋಷ**-ಕೋಪ ದಿಂದ **ಉತ್ಕರ**-ಮೇಲೆದ್ದ ಕಿರಣ ಉಳ್ಳ **ದಕ್ಷ**-ಬ್ರಹ್ಮಾಂಡವನ್ನೇ ಸುಡಲು ಸಮರ್ಥವಾದ **ನೇತ್ರ**-ಹಣೆಗಣ್ಣಿನ **ಕುಟಿಲ**-ವಕ್ರವಾದ **ಪ್ರಾಂತ**-ಕೊನೆ ಯಿಂದ **ಉತ್ಥಿತ**-ಎದ್ದು ಬಂದ **ಅಗ್ನಿ**-ಬೆಂಕಿಯ **ಸ್ಫುರತ್**-ಹೊಳೆಯುವ **ಖದ್ಯೋತೋಪಮ**-ಗಾತ್ರದಲ್ಲಿ ಕೇವಲ ಮಿಣುಕು ಹುಳದಂತಿದ್ದರೂ ಪ್ರಖರತೆಯಲ್ಲಿ ಸೂರ್ಯನಂತಿರುವ **ವಿಷ್ಫುಲಿಂಗ** - ಕಿಡಿಗಳಿಂದ **ಭಸಿತಾಃ**- ಬೂದಿಯಾದರೋ **ಯಃ**-ಯಾರು **ಅಷ್ಟಮಃ ರಸಃ**-ಅಷ್ಟಮರಸವೆನಿಸಿರು ವನೊ **ಈಶಿತುಃ**-ಸೃಷ್ಟ್ಯಾದಿ ಸಕಲ ವಿಷಯದಲ್ಲಿಯೂ ಸಮರ್ಥನಾದ **ತೇ**-ಅಂಥ ನಿನಗೆ **ಸಮಂ**-ಸಮಾನವಾದುದನ್ನು **ಸಮಂತತಃ**-ಎಲ್ಲೆಡೆ **ಕಲಯನ್ ಅಪಿ**-ಹುಡುಕಿದರೂ **ನೈವ ಪಶ್ಯಾಮಿ**-ಸರ್ವಥಾ ಕಾಣಲಾರೆ **ಯಃ**-ಯಾವುದು **ಅಷ್ಟಮಃ ರಸಃ**-ಅಷ್ಟಮ ರಸವೆನಿಸುತ್ತದೊ **ಉತ್ತಮ ವಸ್ತು**-ನಿನಗಿಂತಲೂ

ಉತ್ತಮವಾದ ಆ ವಸ್ತು **ದೂರತರತಃ**-ಬಹು ದೂರದಲ್ಲಿಯೆ **ಅಪಾಸ್ತಂ**-ಇಲ್ಲವೆನಿಸಿದೆ

ಲಕ್ಷ್ಮೀರಮಣನಾದ ನರಸಿಂಹನೇ, ಛಾಂದೋಗ್ಯೋಪನಿಷತ್ತಿನಲ್ಲಿ 'ಏಷಾಂ ಭೂತಾನಾಂ ಪೃಥಿವೀ ರಸಃ ಪೃಥಿವ್ಯಾ ಆಪೋ ರಸಃ' ಎಂದು ಮುಂತಾಗಿ ಪೃಥಿವಿ, ವರುಣ, ಸೋಮ, ರುದ್ರ, ಸರಸ್ವತಿ ಬ್ರಹ್ಮ, ಲಕ್ಷ್ಮಿಯರು ಕ್ರಮವಾಗಿ ಉತ್ತಮರೆಂದು ಏಳು ಮಂದಿ ದೇವತೆಗಳನ್ನು ತಾರತಮ್ಯಕ್ರಮದಿಂದ ಹೇಳಿ, ಎಂಟನೆಯವನಾದ ನಿನ್ನನ್ನು 'ಸ ಏಷ ರಸಾನಾಂ ರಸತಮಃ ಪರಮಃ ಪರಾರ್ಧ್ಯೋಽಷ್ಟಮೋ ಯ ಉದ್ಗೀಥಃ' ಎಂದು ಹೇಳಿ ಅಲ್ಲಿಗೇ ನಿಲ್ಲಿಸಿರುವುದರಿಂದ ನೀನೆ ಸರ್ವೋತ್ತಮ ಅನಾದಿ ಕಾಲದಿಂದ ಪೂರ್ವ ಕಲ್ಪಗಳಲ್ಲಿ ಆಗಿ ಹೋದ ಎಲ್ಲ ಬ್ರಹ್ಮರನ್ನೂ ರುದ್ರರನ್ನೂ ಇಂದ್ರರನ್ನೂ ಇನ್ನುಳಿದ ದೇವತೆಗಳನ್ನೂ ಪ್ರಲಯ ಕಾಲದಲ್ಲಿ ಕೋಪದಿಂದ ಉರಿಯುವ ನಿನ್ನ ಹಣೆಗಣ್ಣಿನ ಒಂದು ಸಣ್ಣ ಕಿಡಿ, ಗಾತ್ರದಲ್ಲಿ ಮಿಣುಕು ಹುಳದಷ್ಟಿದ್ದರೂ ಪ್ರಖರತೆಯಲ್ಲಿ ಸೂರ್ಯನಂತಿದ್ದು ಕ್ಷಣದಲ್ಲಿ ಬೂದಿ ಮಾಡಿತ್ತು ಆದ್ದರಿಂದಲೂ ನೀನೆ ಸರ್ವೋತ್ತಮ ನಿನಗೆ ಸಮಾನರಾದವರನ್ನೆ ನಾನೆಲ್ಲೂ ಕಾಣೆ ಎಷ್ಟು ಹುಡುಕಿದರೂ ಎಲ್ಲೂ ಸಿಗುತ್ತಿಲ್ಲ ಎಷ್ಟು ಅಧ್ಯಯನ ಮಾಡಿದರೂ ಯಾವ ಶಾಸ್ತ್ರದಲ್ಲಿಯೂ ವರ್ಣಿಸಿರುವುದನ್ನು ನಾನು ಕಂಡಿಲ್ಲ ಆದ್ದರಿಂದ ನಿನಗಿಂತಲೂ ಒಂದು ಉತ್ತಮ ವಸ್ತು ಎಂದರೆ ಅದು ಅಷ್ಟಮ ರಸವೇ ಸರಿ ರಸಗಳು ಷಡ್ರಸಗಳೆಂದು ಪ್ರಸಿದ್ಧ ಮಧುರ, ಆಮ್ಲ, ಲವಣ, ಕಟು ಕಷಾಯ ಮತ್ತು ತಿಕ್ತ ಎಂದು ಏಳನೆಯ ರಸವೆಂಬುದೊಂದು ಇಲ್ಲ ಎಂದ ಮೇಲೆ ಅಷ್ಟಮರಸ ಇನ್ನೆಲ್ಲಿ ? ಹಾಗೆಯೇ ನಿನಗೆ ಸಮಾನರಿಲ್ಲ, ಉತ್ತಮರಿರುವುದಂತೂ ಅತ್ಯಂತ ಅಸಂಭಾವಿತ 'ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯಃ'

ಪ್ರಳಯಕಾಲದಲ್ಲಿ ದೇವತೆಗಳಿಗೆ ಸ್ವೋತ್ತಮರಲ್ಲಿ ಲಯ ಎಂದು ಪ್ರಸಿದ್ಧ ಆದರೆ ಅದು ಬ್ರಹ್ಮಾಂಡನಾಶಾನಂತರ ಹೊರಗೆ ನಡೆಯುವಂಥಹುದು ಅದಕ್ಕಿಂತ ಮೊದಲಿಗ ಆ ದೇವತೆಗಳ ಲಯ ಬ್ರಹ್ಮಾಂಡದೊಳಗೆ ಶ್ರೀಹರಿಯ ಸಂಕರ್ಷಣ ಮೂರ್ತಿಯಿಂದಲೂ ನರಸಿಂಹಮೂರ್ತಿಯಿಂದಲೂ ದುರ್ಗಾದೇವಿಯಿಂದಲೂ ನಡೆದಿರುತ್ತದೆ ರುದ್ರದೇವರೂ

ಇಂದ್ರಾದಿದೇವತೆಗಳ ಲಯ ಮಾಡಿರುತ್ತಾರೆ ಅನೇಕರೂಪಗಳುಳ್ಳ ದೇವತೆಗಳಿಗೆ ಅನೇಕ ಬಾರಿ ಲಯ ಸಂಭವಿಸೀಯುವೆ ಭಾಗವತ ತಾತ್ಪರ್ಯದಲ್ಲಿ 'ತೇಷಾಮನ್ಯಾ ತನೂರ್ಹರಿಃ ನೃಸಿಂಹರೂಪಃ ಸರ್ವೇಷಾಂ ಭಿತ್ವಾ ತಾಭಿರಲಂಕೃತಃ ನೃತ್ಯತೇ ಪ್ರಲಯೇ ದೇವಃ' ಎಂಬಲ್ಲಿ 'ಅನ್ಯಾಃ ತನೂಃ ಭಿತ್ವಾ' 'ಬೇರೆ ಶರೀರಗಳನ್ನು ಸಂಹರಿಸಿ' ಎಂಬ ಮಾತಿನಿಂದ ಇದು ವ್ಯಕ್ತವಾಗುತ್ತದೆ

ನರಸಿಂಹನ ನಖಕ್ಕೂ ನೇತ್ರಕ್ಕೂ ಬೇದವಿಲ್ಲವುದರಿಂದ ಈ ಪದ್ಯವೂ ನಖಸ್ತುತಿಯೆ ನೇತ್ರವೆಂದರೂ ಹಿರಣ್ಯಕಶಿಪುವಿನ ಉದರದಲ್ಲಿದ್ದ ಕರುಳ ಮಾಲೆಯನ್ನು ನರಸಿಂಹ ತನ್ನ ಕೊರಳಿಗೆ ತಂದು ತೊಡಿಸುವಲ್ಲಿ ಸಾಧನವೆನಿಸಿದ ನಖವೆಂದೂ ಗ್ರಹಿಸಬಹುದು ನಯತೇಃ ಕರಣೇ ಷ್ಟ್ರನ್ ಆಗ ನೇರವಾಗಿಯೇ ಇದೂ ನಖಸ್ತುತಿಯಾಗಬಹುದು

ದೇವತೆಗಳನ್ನು ನರಸಿಂಹನು ಸಂಹರಿಸುವುದು ಪ್ರಳಯಕಾಲದಲ್ಲಿ ಅದೂ ಅವರನ್ನು ಬೇಗನೆ ಮೋಕ್ಷಕ್ಕೊಯ್ಯುವುದಕ್ಕಾಗಿ ಪ್ರೀತಿಯಿಂದ ಆದ್ದರಿಂದ ಈ ಕೋಪ ಕ್ಷಮಾತ್ಮಕ, ಸಂಹಾರವೂ ಮಂಗಳಕರ, ಆದ್ದರಿಂದ ಮೋಕ್ಷಶಾಸ್ತ್ರವಾದ ವಾಯುಸ್ತುತಿಗೆ ಮಂಗಲಾಚರಣೆಯಂತಿದೆ ಈ ನಖಸ್ತುತಿ

ಶ್ರೀಮದಾಚಾರ್ಯರು ರಾಮ ಕೃಷ್ಣ ವೇದವ್ಯಾಸರನ್ನು ಹನುಮ ಭೀಮ ಮಧ್ವರೂಪಗಳಿಂದ ಪೂಜಿಸುವ ಅಪೂರ್ವದೃಶ್ಯವನ್ನು ಕಂಡ ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯರು ಭಕ್ತ್ಯುದ್ರೇಕದಿಂದ ಒಡನೆ ವಾಯುಸ್ತುತಿ ರಚಿಸಿ ಆಚಾರ್ಯರಿಗೆ ಸಮರ್ಪಿಸಿದರು ಆಗ ಆಚಾರ್ಯರು ನಖಸ್ತುತಿ ರಚಿಸಿ ಅದನ್ನು ವಾಯುಸ್ತುತಿಯ ಆದ್ಯಂತಗಳಲ್ಲಿ ಪಠಿಸಿ ಸಕಲಾಭೀಷ್ಟವನ್ನು ಭಕ್ತರು ಹೊಂದಲಿ ಎಂದು ಆಜ್ಞಮಾಡಿದರು ಇಂದಿಗೂ ಅದೇ ಸಂಪ್ರದಾಯವಿದೆ

ವಾಯುಸ್ತುತಿ ಕೇವಲ ವಾಯುದೇವರ ಸ್ತುತಿಯಾಯಿತೆಂದು ಅತೃಪ್ತಿಯಿಂದ ಆದ್ಯಂತಗಳಲ್ಲಾದರೂ ಹರಿಸ್ತುತಿಯನ್ನು ಭಕ್ತರು ಪಠಿಸಲೆಂದು ನಖಸ್ತುತಿಯನ್ನು ಆಚಾರ್ಯರು ರಚಿಸಿದರೆನ್ನಲು ಆಧಾರ ಸಾಲದು ಏಕೆಂದರೆ 'ಅಸ್ತವ್ಯಸ್ತಂ' (ಶ್ಲೋ ೩೭) ಎಂಬುದು ಹರಿಸ್ತುತಿಯಾಗಿದೆ ಪಂಡಿತಾಚಾರ್ಯರೂ ಅಂತ್ಯದಲ್ಲಿ 'ಸ್ತುತಿಮಕೃತ ಹರೇರ್ವಾಯುದೇವಸ್ಯ ಚಾಸ್ಯ'

' ಹರಿವಾಯುಗಳಿಬ್ಬರ ಸ್ತುತಿಯನ್ನೂ ಮಾಡಿದ್ದೇನೆ' ಎಂದಿದ್ದಾರೆ ಆದ್ಯಂತಗಳಲ್ಲಿ 'ಶ್ರೀಮದ್ವಿಷ್ಣಂಘ್ರಿ ನಿಷ್ಠಾ' 'ವಂದೇ ತಂ ತ್ವಾ' ಎಂದು ಕೇವಲ ವಾಯುಸ್ತುತಿ ಇದೆ ಎನ್ನಲೂ ಬರುವಂತಿಲ್ಲ ಆದಿಯಲ್ಲಿ ಶ್ರೀಮದಾಚಾರ್ಯರನ್ನು ವಿಷ್ಣುನಿಷ್ಠೆ ಉಳ್ಳವರೆಂದೂ ಅಂತ್ಯದಲ್ಲಿ ಶ್ರೀಶನನ್ನು ಸದಾ ವಂದಿಸುವವರೆಂದೂ ಸ್ತೋತ್ರ ಮಾಡಿದುದು ವಿಷ್ಣುಸ್ತುತಿಯೇ ಆಗುವುದು ಆದ್ದರಿಂದ ಶ್ರೀಮದಾಚಾರ್ಯರು ರಚಿಸಿದ ನಖ ಸ್ತುತಿ 'ರೂಪಮನ್ಯದಿವ ಧನ್ಯಮಾತ್ಮನಃ' ಎಂಬಂತೆ ಮಹಾಮಹಿಮ ಉಳ್ಳದ್ದೆಂದು ಅದನ್ನು ವಾಯುಸ್ತುತಿಯ ಆದ್ಯಂತಗಳಲ್ಲಿ ಪಠಿಸುವ ಸಂಪ್ರದಾಯ ಬಂದಿರಬಹುದು

ವಸ್ತುತಃ ಬ್ರಹ್ಮಸೂತ್ರಗಳಲ್ಲಿ ಪ್ರತಿ ಸೂತ್ರವೂ ಬ್ರಹ್ಮವಿದ್ಯೆ ಎಂದು ಆದ್ಯಂತ ಓಂಕಾರದಿಂದ ಕೂಡಿರುವಂತೆ ವಾಯುಸ್ತುತಿಯು ಪ್ರತಿಶ್ಲೋಕದಲ್ಲಿ ಹರಿವಾಯುಸ್ತುತಿರೂಪವಾಗಿದ್ದು ಪ್ರತ್ಯೇಕ ಪ್ರತ್ಯೇಕ ಫಲ ನೀಡುತ್ತದೆ ಎಂದರೆ ತಪ್ಪಾಗಲಾರದು ಯದ್ಯಪಿ ವಾಯುಪರವಾಗಿ ಅರ್ಥೈಸಿದ ಮಾತ್ರಕ್ಕೆ ವಾಯುವಿನ ಮಹಿಮೆಯೇ ಇಷ್ಟಿರುವಾಗ ಅವನಿಗೆ ಪ್ರಭುವಾದ ಹರಿಯ ಮಹಿಮೆ ಇನ್ನೆಷ್ಟಿರಬಹುದೆಂದು ಹರಿಸ್ತುತಿಯಾಗಬಲ್ಲದು ಅಥವಾ ಸೇವಕನು ಮಾಡಿದ ಮಹಾಕಾರ್ಯದ ಯಶಸ್ಸು ಪ್ರಭುವಿಗೆ ಸಹಜವಾಗಿ ಬರುವುದೂ ಉಂಟು ಆದರೂ ಹರಿವಾಯುಗಳಿಬ್ಬರನ್ನೂ ನೇರವಾಗಿ ಸ್ತುತಿಸುವಂತೆ ಶ್ಲೋಕಗಳನ್ನು ಸುಲಭವಾಗಿ ಅರ್ಥೈಸಲು ಬರುವಂತಿದ್ದರೆ ಇನ್ನೂ ಹೆಚ್ಚು ಸ್ವಾರಸ್ಯ ಕಾಣುತ್ತದೆ ಶ್ರೀಮದಾಚಾರ್ಯರ ವಿಶೇಷಾನುಗ್ರಹ ಪಾತ್ರರಾದ ಕವಿಕುಲತಿಲಕರೆನಿಸಿದ ಪಂಡಿತಾಚಾರ್ಯರ ಮಾತಿನಲ್ಲಿ ಒಂದಕ್ಕಿಂತ ಹೆಚ್ಚು ಅರ್ಥಗಳನ್ನು ಸುಲಭವಾಗಿ ಕಂಡುಕೊಂಡರೆ ಅದನ್ನು ಕಾಲ್ಪನಿಕವೆಂದು ತಳ್ಳಿ ಹಾಕುವುದು ಉಚಿತವಾಗಲಾರದು ಪ್ರಾಚೀನ ವ್ಯಾಖ್ಯಾನಕಾರರು ಕನಿಷ್ಠ ವಾಯು ಪರವಾದ ಒಂದು ಅರ್ಥವನ್ನಾದರೂ, ಎಲ್ಲಾ ಜಿಜ್ಞಾಸುಗಳು ತಿಳಿಯಲೆಂದು ಬಗೆದು ಹರಿ ಪರವಾದ ಇನ್ನೊಂದು ಅರ್ಥದ ಬಗ್ಗೆ ಮೌನ ತಾಳಿರಬಹುದು ಇನ್ನು ಮುಂದೆ ಹೇಳುವ ಹರಿ ಪರವಾದ ಅರ್ಥವೂ ಸರಳವಾಗಿಯೇ ಇರುವುದರಿಂದ ಕವಿಗೆ ಅದು ವಿವಕ್ಷಿತವೆಂಬುದರಲ್ಲಿ ತಪ್ಪಿಲ್ಲ

**********

# ಶ್ರೀ ಹರಿ ವಾಯು ಸ್ತುತಿ

-೧-

ಹರಿಃ ಓಂ।

ಶ್ರೀಮದ್ವಿಷ್ಣ್ವಂಘ್ರಿನಿಷ್ಠಾ -
    ತಿಗುಣಗುರುತಮ ಶ್ರೀಮದಾನಂದತೀರ್ಥ-
ತ್ರೈಲೋಕ್ಯಾಚಾರ್ಯಪಾದೋ -
    ಜ್ಜ್ವಲಜಲಜಲಸತ್ಪಾಂಸವೋಽಸ್ಮಾನ್ಪುನಂತು
ವಾಚಾಂ ಯತ್ರ ಪ್ರಣೇತ್ರೀ
    ತ್ರಿಭುವನಮಹಿತಾ ಶಾರದಾ ಶಾರದೇಂದು
ಜ್ಯೋತ್ಸ್ನಾಭದ್ರಸ್ಮಿತಶ್ರೀ
    ಧವಲಿತಕಕುಭಾ ಪ್ರೇಮಭಾರಂ ಬಭಾರ ॥

**ಶ್ರೀಹರಿ, ನಿನ್ನ ಪಾದಧೂಳಿ ಪರಮಪವಿತ್ರ :**

**ಶಾರದ**-ಶರತ್ಕಾಲದ **ಇಂದು**-ಚಂದ್ರನ **ಜ್ಯೋತ್ಸ್ನಾ**-ಕಾಂತಿಯಂಥ **ಭದ್ರ**-ಮಂಗಳಕರವಾದ **ಸ್ಮಿತ**-ಮಂದಹಾಸದ **ಶ್ರೀ**-ಕಾಂತಿಯಿಂದ **ಧವಲಿತ ಕಕುಭಾ**-ದಿಕ್ಕುಗಳನ್ನು ಬೆಳಗಿಸುವ **ತ್ರಿಭುವನ**-ಮೂರೋಕದಲ್ಲಿ **ಮಹಿತಾ**-ಪೂಜಿಸಲ್ಪಡುವ **ವಾಚಾಂ ಪ್ರಣೇತ್ರೀ**-ಸಕಲವಾಗಭಿಮಾನಿನಿಯಾದ **ಶಾರದಾ**-ಮಹಾಲಕ್ಷ್ಮೀದೇವಿಯು **ಯತ್ರ**-ಎಲ್ಲಿ **ಪ್ರೇಮಭಾರಂ**-ಗಾಢವಾದ ಪ್ರೇಮವನ್ನು **ಬಭಾರ**-ಹೊಂದಿರುವಳೊ **ಶ್ರೀಮತ್**-ಲಕ್ಷ್ಮೀಯುಕ್ತನಾದ **ವಿಷ್ಣು**-ವಿಷ್ಣುವಿನ **ಅಂಘ್ರಿ**-ಪಾದಗಳಲ್ಲಿಟ್ಟಿರುವ **ನಿಷ್ಠಾ**-ನಿಶ್ಚಲಭಕ್ತಿ ಎಂಬ **ಅತಿಗುಣ**-ದೊಡ್ಡಗುಣಉಳ್ಳ ಬ್ರಹ್ಮಾದಿಗಳಿಗೆ **ಗುರುತಮ**-ಶ್ರೇಷ್ಠಗುರುವಾದ **ಶ್ರೀಮತ್**-ಶಮದಮಾದಿ ಸಂಪತ್ತುಳ್ಳವರಿಗೆ **ಆನಂದ**-ಆನಂದಕರವಾದ **ತೀರ್ಥ**-ಶಾಸ್ತ್ರ ರಚಿಸಿ ಉಪದೇಶಿಸುವ **ತ್ರೈಲೋಕ್ಯ**-ಮೂರೋಕದ **ಆಚಾರ್ಯ**-ಗುರುವೆನಿಸಿದ ವೇದವ್ಯಾಸರ **ಪಾದ**-ಪಾದಗಳೆಂಬ **ಉಜ್ಜ್ವಲ**-

ಕಾಂತಿಯುಕ್ತವಾದ **ಜಲಜ**-ಕಮಲಗಳಲ್ಲಿ **ಲಸತ್**-ಶೋಭಿಸುವ **ಪಾಂಸವಃ** ಆ ಧೂಳಿಗಳು **ಅಸ್ಮಾನ್**-ನಮ್ಮನ್ನು **ಪುನಂತು**-ಪವಿತ್ರೀಕರಿಸಲಿ

ಶ್ರೀ ಲಕ್ಷ್ಮೀನಾರಾಯಣರ ಪಾದಗಳಲ್ಲಿ ಅಚಲವಾದ ಭಕ್ತಿ ಎಂಬ ಮಹಾಗುಣ ಉಳ್ಳ ಬ್ರಹ್ಮಾದಿ ದೇವತೆಗಳಿಗೆ ಶ್ರೇಷ್ಠ ಗುರುಗಳ ಶ್ರೀವೇದವ್ಯಾಸರು ಅವರು ಶಮದಮಾದಿ ಸಂಪತ್ತುಳ್ಳ ಸಾತ್ವಿಕರಿಗೆ ಬ್ರಹ್ಮಸೂತ್ರ ಇತಿಹಾಸ ಪುರಾಣರೂಪವಾದ ಆನಂದಕರ ಶಾಸ್ತ್ರ ರಚಿಸಿ ಉಪದೇಶ ಮಾಡಿ ಮೂಲೋಕಕ್ಕೆ ಗುರುವೆನಿಸಿದವರು ಅವರ ಪಾದಕಮಲಧೂಳಿಗಳಲ್ಲಿ ಸಕಲ ವಾಙ್ಮನಸಾಬಿಮಾನಿನಿ ತ್ರಿಲೋಕ ವಂದ್ಯೆ ಮಹಾಲಕ್ಷ್ಮಿಯೂ ಗಾಢವಾದ ಪ್ರೇಮವಿರಿಸಿರುವಳು ಆ ಪ್ರೇಮದಿಂದ ಶರತ್ಕಾಲದ ಚಂದ್ರನ ಬೆಳದಿಂಗಳಿನಂದ ಮಂಗಳಕರವಾದ ಮುಗುಳುನಗೆಯು ಕಾಂತಿ ಸೂಸುತ್ತ ದಿಕ್ಕುಗಳನ್ನು ಬೆಳಗಿಸುತ್ತ ಅವಳು ಯಾವ ವೇದವ್ಯಾಸರ ಪಾದಧೂಳಿಯನ್ನು ಸೇವಿಸುವಳೋ ಆ ಪಾದಧೂಳಿ ನಮ್ಮೆಲ್ಲರನ್ನೂ ಪವಿತ್ರೀಕರಿಸಲಿ

**ವಾಯುದೇವ, ನಿನ್ನ ಪಾದಧೂಳಿ ಪರಮಪವಿತ್ರ.**

**ಶಾರದ**-ಶರತ್ಕಾಲದ **ಇಂದು**-ಚಂದ್ರನ **ಜ್ಯೋತ್ಸ್ನಾ**-ಕಾಂತಿಯಂಥ **ಭದ್ರ**-ಮಂಗಳಕರವಾದ **ಸ್ಮಿತ**-ಮಂದಹಾಸದ **ಶ್ರೀ**-ಕಾಂತಿಯಿಂದ **ಧವಲಿತ ಕಕುಭಾ**-ದಿಕ್ಕುಗಳನ್ನು ಬೆಳಗುವ **ತ್ರಿಭುವನ**-ಮೂಲೋಕದಲ್ಲಿ **ಮಹಿತಾ**-ಪೂಜಿಸಲ್ಪಡುವ **ವಾಚಾಂ ಪ್ರಣೇತ್ರೀ**-ಸಕಲವಾಗಭಿಮಾನಿನಿಯಾದ **ಶಾರದಾ**-ಭಾರತೀದೇವಿಯು **ಯತ್ರ**-ಎಲ್ಲಿ **ಪ್ರೇಮಭಾರಂ**-ಗಾಢವಾದ ಪ್ರೇಮವನ್ನು **ಬಭಾರ**-ಹೊಂದಿರುವಳೊ **ಶ್ರೀಮತ್**-ಲಕ್ಷ್ಮೀಯುಕ್ತನಾದ **ವಿಷ್ಣು**-ವಿಷ್ಣುವಿನ **ಅಂಘ್ರಿ**-ಪಾದಗಳಲ್ಲಿಟ್ಟಿರುವ **ನಿಷ್ಠಾ**-ನಿಶ್ಚಲಭಕ್ತಿ ಎಂಬ **ಅತಿಗುಣ**-ದೊಡ್ಡ ಗುಣವಿಂದ **ಗುರುತಮ**-ಶ್ರೇಷ್ಠಗುರುವೆನಿಸಿದ **ಶ್ರೀಮತ್**-ಶಮದಮಾದಿ ಸಂಪನ್ನರಿಗೆ **ಆನಂದ**-ಆನಂದಕರವಾದ **ತೀರ್ಥ** - ಭಾಷ್ಯಾದಿ ಗ್ರಂಥ ರಚಿಸಿ ಉಪದೇಶಿಸುವ **ತ್ರೈಲೋಕ್ಯ** - ಮೂಲೋಕದ **ಆಚಾರ್ಯ**-ಗುರುವಾದ ಮಧ್ವಾಚಾರ್ಯರ **ಪಾದ**-ಪಾದಗಳೆಂಬ **ಉಜ್ಜ್ವಲ**-ಕಾಂತಿಯುತವಾದ **ಜಲಜ**-ಕಮಲಗಳಲ್ಲಿ **ಲಸತ್**-ಶೋಭಿಸುವ **ಪಾಂಸವಃ**-ಧೂಳಿಗಳು **ಅಸ್ಮಾನ್**-ನಮ್ಮನ್ನು **ಪುನಂತು**-ಪವಿತ್ರೀಕರಿಸಲಿ

ಶ್ರೀಲಕ್ಷ್ಮೀನಾರಾಯಣರ ಪಾದಗಳಲ್ಲಿ ಅಚಲವಾದ ಭಕ್ತಿ ಎಂಬ ಮಹಾ ಗುಣದಿಂದ ಶ್ರೇಷ್ಠಗುರು ಎನಿಸಿದವರು ಶ್ರೀಮಧ್ವಾಚಾರ್ಯರು. ಅವರು ಶಮದಮಾದಿ ಸಂಪನ್ನರಾದ ಸಾತ್ವಿಕರಿಗೆ ಭಾಷ್ಯಾದಿಗ್ರಂಥ ರಚಿಸಿ ಉಪದೇಶ ಮಾಡಿ ಮೂಲೋಕಗುರುವೆನಿಸಿದ್ದಾರೆ. ಅವರ ಪಾದಕಮಲ ಧೂಳಿಗಳಲ್ಲಿ ಸಕಲ ಪಾಪ್ಮನಾಶಿನಿಯಾಗಿ ತ್ರಿಲೋಕವನ್ನು ಶಾಂತಿದೇವಿ ಗಾಢವಾದ ಪ್ರೇಮವಿರಿಸಿರುವಳು. ಆ ಪ್ರೇಮದಿಂದ ಅವಳು ಶರತ್ಕಾಲದ ಚಂದ್ರನ ಬೆಳದಿಂಗಳಿನಂದ ಮಂಗಳಕರವಾದ ಮುಗುಳುನಗೆಯ ಕಾಂತಿ ಸೂಸುತ್ತ ದಿಕ್ಕುಗಳನ್ನು ಬೆಳಗಿಸುತ್ತ ಬರುವ ಶ್ರೀಮದಾಚಾರ್ಯರ ಪಾದಧೂಳಿಯನ್ನು ಸೇವಿಸುವಳು. ಆ ಪಾದಧೂಳಿ ನಮ್ಮೆಲ್ಲರನ್ನೂ ಪವಿತ್ರೀಕರಿಸಲಿ

-೨-

**ಉತ್ಕಂಠಾಕುಂಠಕೋಲಾ-**
**ಹಲಜವವಿದಿತಾಜಸ್ರಸೇವಾನುವೃದ್ಧ-**
**ಪ್ರಾಜ್ಞಾತ್ಮಜ್ಞಾನಧೂತಾಂ-**
**ಧತಮಸಸುಮನೋಮೌಲಿರತ್ನಾವಲೀನಾಂ ।**
**ಭಕ್ತ್ಯುದ್ರೇಕಾವಗಾಢ**
**ಪ್ರಘಟನಸಘಟಾತ್ಕಾರಸಂಘೃಷ್ಯಮಾಣ**
**ಪ್ರಾಂತಪ್ರಾಗ್ರ್ಯಾಂಘ್ರಿಪೀಠೋ-**
**ತ್ಥಿತಕನಕರಜಃಪಿಂಜರಾ ರಂಜಿತಾಶಾಃ ॥**

**ಹರಿವಾಯುಗಳೆ, ನಿಮ್ಮ ಪಾದಧೂಳಿ ಬಣ್ಣ ಬದಲಿಸಿಕೊಳ್ಳುತ್ತಿವೆ -**

**ಉತ್ಕಂಠಾ**-ಅತ್ಯಂತ ಉತ್ಕಟತೆ ಇರುವ ಪ್ರಯುಕ್ತ **ಅಕುಂಠ**-ನಿಲ್ಲದ ಹೆಚ್ಚುತ್ತಿರುವ **ಕೋಲಾಹಲ**-ಕೋಲಾಹಲದಿಂದ ಮತ್ತು **ಜವ**-ವೇಗದಿಂದ **ವಿದಿತ**-ತಿಳಿದು ಬರುವ **ಅಜಸ್ರ**-ನಿತ್ಯಮಾಡುವ **ಸೇವಾ**-ಸೇವೆಯಿಂದ **ಅನುವೃದ್ಧ**-ಅಭಿವೃದ್ಧವಾದ **ಪ್ರಾಜ್ಞಾತ್ಮ**-ಸರ್ವಜ್ಞನಾದ ಪರಮಾತ್ಮನ **ಜ್ಞಾನ**-ಜ್ಞಾನದಿಂದ **ಧೂತ**-ನಾಶಹೊಂದಿದ **ಅಂಧತಮಸ**-ಅಜ್ಞಾನಾಂಧಕಾರ ಉಳ್ಳ **ಸುಮನಃ**-ದೇವತೆಗಳ **ಮೌಲಿ**-ಕಿರೀಟಗಳಲ್ಲಿರುವ **ರತ್ನಾವಲೀನಾಂ**-

ರತ್ನರಾಶಿಗಳ **ಭಕ್ತ್ಯುದ್ರೇಕ**-ಭಕ್ತ್ಯುದ್ರೇಕ ಪ್ರಯುಕ್ತವಾದ **ಅವಗಾಢ**-ಬಲವತ್ತಾದ **ಪ್ರಘಟನ**-ತಾಗುವಿಕೆಯಿಂದಾದ **ಸಘಟಾತ್ಕಾರ**-ದೊಡ್ಡ ಶಬ್ದವಾಗುವಂತೆ **ಸಂಘೃಷ್ಯಮಾಣ**-ಘರ್ಷಣೆಹೊಂದುವ **ಪ್ರಾಂತ**-ಬದಿಯುಳ್ಳ **ಪ್ರಾಗ್ರ್ಯ**-ಶ್ರೇಷ್ಠವಾದ **ಅಂಘ್ರಿಪೀಠ**-ಪಾದಪೀಠಗಳಿಂದ **ಉತ್ಥಿತ**-ಎದ್ದ **ಕನಕರಜಃ**-ಚಿನ್ನದ ಧೂಳಿನಿಂದ **ಪಿಂಜರಾಃ**-ಹಳದಿಗೆಂಪಾದ **ರಂಜಿತ**-ತಮ್ಮ ಬಣ್ಣದಿಂದ ಬೆಳಗಿಸಲ್ಪಟ್ಟ **ಆಶಾಃ**-ದಿಕ್ಕುಗಳುಳ್ಳ **ಪಾಂಸವಃ**-ಲಕ್ಷ್ಮೀ ನಾರಾಯಣರ ಮತ್ತು ವಾಯುದೇವರ ಪಾದಧೂಳಿಗಳು **ಅಸ್ಮಾನ್**-ನಮ್ಮನ್ನು **ಪುನಂತು**-ಪವಿತ್ರೀಕರಿಸಲಿ

ಶ್ರೀಹರಿಯಿಂದಲೂ ಶ್ರೀಮದಾಚಾರ್ಯರಿಂದಲೂ ತತ್ವೋಪದೇಶ ಪಡೆಯಲು ನಾ ಮುಂದು ತಾ ಮುಂದೆಂದು ಅತ್ಯಂತ ಉತ್ಸುಕತೆಯಿಂದ ಕೋಲಾಹಲ ಮಾಡುತ್ತ ವೇಗದಿಂದ ದೇವತೆಗಳು ಬರುತ್ತಾರೆ ಅವರು ಬರುವಾಗಿನ ಕೋಲಾಹಲ ವೇಗಗಳಿಂದಲೇ ಅವರು ಮಾಡುವ ನಿರಂತರ ಸೇವೆ ಲೋಕ ಪ್ರಸಿದ್ಧವಾಗಿದೆ ಮತ್ತು ನಾವೂ ಹೀಗೆ ಸೇವೆ ಮಾಡಬೇಕೆಂದು ಅನ್ಯರಿಗೂ ತಿಳಿದು ಬರುವಂತಿದೆ ಇಂಥ ಸೇವೆಯಿಂದ ಅವರಲ್ಲಿರುವ ಪರಮಾತ್ಮ ತತ್ವಜ್ಞಾನ ಕ್ರಮವಾಗಿ ಹೆಚ್ಚುತ್ತಲೆ ಇವೆ ಇದರಿಂದ ಅವರಲ್ಲಿ ಅಜ್ಞಾನದ ಅಂಧಕಾರ ಪೂರ್ತಿ ನಾಶವಾಗಿದೆ ಹೀಗೆ ದೇವತೆಗಳು ಹರಿವಾಯುಗಳ ಪಾದಗಳಿಗೆ ಭಕ್ತ್ಯುದ್ರೇಕದಿಂದ ನಮಿಸುವುದರಿಂದ ಚಿನ್ನದ ಪಾದಪೀಠಗಳ ಅಂಚಿಗೆ ಅವರ ರತ್ನ ಕಿರೀಟಗಳು ಬಲವಾಗಿ ಶಬ್ದವಾಗುವಂತೆ ಘರ್ಷಣೆ ಹೊಂದುತ್ತವೆ ಆಗ ಏಳುವ ಚಿನ್ನದ ಧೂಳಿನ ಕಣಗಳೊಂದಿಗ ಬೆರೆತು ಪಾದಗಳ ಕೆಂಧೂಳಿಗಳು ಹಳದಿಗೆಂಪು ಬಣ್ಣಕ್ಕೆ ತಿರುಗುತ್ತವೆ ತಮ್ಮ ಬಣ್ಣದಿಂದ ದಿಕ್ಕುಗಳನ್ನೂ ಬೆಳಗಿಸುತ್ತವೆ

-೩-

**ಜನ್ಮಾಧಿವ್ಯಾಧ್ಯುಪಾಧಿ**
**ಪ್ರತಿಹತಿವಿರಹಪ್ರಾಪಕಾಣಾಂ ಗುಣಾನಾಂ**
**ಅಗ್ರ್ಯಾಣಾಮರ್ಪಕಾಣಾಂ**
**ಚಿರಮುದಿತಚಿದಾನಂದಸಂದೋಹದಾನಾಂ ।**

**ಏತೇಷಾಮೇಷ ದೋಷ -**
**ಪ್ರಮುಷಿತಮನಸಾಂ ದ್ವೇಷಿಣಾಂ ದೂಷಕಾಣಾಂ**
**ದೈತ್ಯಾನಾಮಾರ್ತಿಮಂಧೇ**
**ತಮಸಿ ವಿದಧತಾಂ ಸಂಸ್ತವೇ ನಾಸ್ಮಿ ಶಕ್ತಃ ॥**

**ಹರಿವಾಯುಗಳೆ,ನಿಮ್ಮ ಪಾದಧೂಳಿಗಳ ಮಹಿಮೆಯು ವರ್ಣನಾತೀತಃ**

**ಜನ್ಮ** - ಜನ್ಮವೂ **ಆಧಿ** - ಮನೋರೋಗವೂ **ವ್ಯಾಧಿ** - ಶರೀರರೋಗವೂ ಇವುಗಳಿಗೆ **ಉಪಾಧಿ** - ಕಾರಣವಾದ ಅಜ್ಞಾನಾದಿದೋಷಗಳ **ಪ್ರತಿಹತಿ** - ಉಪದ್ರವದ **ವಿರಹ** - ಅಭಾವವನ್ನು **ಪ್ರಾಪಕಾಣಾಂ**- ತಂದುಕೊಡುವ **ಅಗ್ರ್ಯಾಣಾಂ** - ಶ್ರೇಷ್ಠವಾದ **ಗುಣಾನಾಂ** - ಗುಣಗಳನ್ನು **ಅರ್ಪಕಾಣಾಂ** - ಕೊಡುವ **ಚಿರಂ** - ಶಾಶ್ವತವಾಗಿ **ಉದಿತ** - ಪ್ರಕಟಗೊಳ್ಳುವ **ಚಿತ್** - ಜ್ಞಾನವೂ **ಆನಂದ** - ಆನಂದವೂ ಇವುಗಳ **ಸಂದೋಹ**- ಸಮೂಹಗಳನ್ನು **ದಾನಾಂ** - ಕೊಡುವ **ದೋಷ** - ಅಜ್ಞಾನಾದಿ ದೋಷಗಳಿಂದ **ಪ್ರಮುಷಿತ** - ಕೆಟ್ಟಿರುವ **ಮನಸಾಂ** - ಮನಸ್ಸುಳ್ಳ **ದ್ವೇಷಿಣಾಂ**- ದ್ವೇಷಮಾಡುವ ಸ್ವಭಾವದವರಾದ **ದೂಷಕಾಣಾಂ** - ನಿಂದಕರಾದ **ದೈತ್ಯಾನಾಂ** - ದೈತ್ಯರಿಗೆ **ಅಂಧೇ ತಮಸಿ** - ಅಂಧಂತಮಸ್ಸಿನಲ್ಲಿ **ಚಿರಂ**- ಶಾಶ್ವತವಾಗಿ **ಆರ್ತಿಂ** - ದುಃಖವನ್ನು **ವಿದಧತಾಂ** - ಉಂಟುಮಾಡುವ **ಏತೇಷಾಂ** - ಈ ಹರಿವಾಯುಗಳ ಪಾದಧೂಳಿಗಳ **ಸಂಸ್ತವೇ** - ಸ್ತೋತ್ರ ಮಾಡುವುದರಲ್ಲಿ **ಏಷಃ** - ಈ ನಾನು **ಶಕ್ತಃ** - ಶಕ್ತನು **ನಾಸ್ಮಿ** - ಆಗಿಲ್ಲ

ಈ ಹರಿವಾಯುಗಳ ಪಾದಧೂಳಿಗಳು ಭಕ್ತರ ಜನನ ಮನೋರೋಗ ಶರೀರರೋಗ ಮುಂತಾದವುಗಳಿಗೆ ಕಾರಣವಾದ ಅಜ್ಞಾನ ವಿಪರೀತಜ್ಞಾನಾದಿ ದೋಷಗಳ ಉಪದ್ರವವನ್ನು ನಾಶಮಾಡುವುವು ಜ್ಞಾನ ಭಕ್ತ್ಯಾದಿ ಉತ್ತಮ ಗುಣಗಳನ್ನಿತ್ತು ಕೊನೆಯಲ್ಲಿ ಶಾಶ್ವತವಾಗಿ ಮೋಕ್ಷದಲ್ಲಿ ಅಭಿವ್ಯಕ್ತವಾಗುವ ಸ್ವರೂಪಭೂತ ಜ್ಞಾನಾನಂದಗಳನ್ನು ನೀಡುವುವು ವಿಷ್ಣು ವೈಷ್ಣವರನ್ನು ನಿಂದಿಸುವ ದ್ವೇಷಿಸುವ ಸ್ವಭಾವದ ದೈತ್ಯರಿಗೆ ಶಾಶ್ವತವಾಗಿ ಅಂಧಂತಮಸ್ಸಿನಲ್ಲಿ ಅಭಿವ್ಯಕ್ತವಾಗುವ ಸ್ವರೂಪಭೂತ ದುಃಖ ನೀಡುವವು ಇಂಥ ಪಾದಧೂಳಿಗಳ ಮಹಿಮೆಯನ್ನು ಪೂರ್ತಿಯಾಗಿ ವರ್ಣಿಸಲು ನಾನು ಶಕ್ತನಾಗಿಲ್ಲ

-೪-

ಅಸ್ಯಾವಿಷ್ಕರ್ತುಕಾಮಂ

ಕಲಿಮಲಕಲುಷೇಽಸ್ಮಿನ್ ಜನೇ ಜ್ಞಾನಮಾರ್ಗಂ

ವಂದ್ಯಂ ಚಂದ್ರೇಂದ್ರರುದ್ರ -

ದ್ಯುಮಣಿಫಣಿವಯೋನಾಯಕಾದ್ಯೈರಿಹಾದ್ಯ ।

ಮಧ್ವಾಖ್ಯಂ ಮಂತ್ರಸಿದ್ಧಂ

ಕಿಮುತ ಕೃತವತೋ ಮಾರುತಸ್ಯಾವತಾರಂ

ಪಾತಾರಂ ಪಾರಮೇಷ್ಠ್ಯಂ

ಪದಮಪವಿಪದಃ ಪ್ರಾಪ್ತುರಾಪನ್ನ ಪುಂಸಾಂ ॥

**ಹರಿ, ನಿನ್ನ ಮಹಿಮೆಯನ್ನು ಏನೆಂದು ವರ್ಣಿಸಲಿ ?**

**ಆದ್ಯ** - ಆದಿ ಕಾರಣನಾದ ಹರಿಯೇ **ಕಲಿಮಲಕಲುಷೇ** ಕಲಿಯಿಂದಾದ ಅಜ್ಞಾನಾದಿ ದೋಷಗಳಿಂದ ಕಲುಷಿತವಾದ **ಅಸ್ಮಿನ್ಜನೇ** - ಈ ಭಕ್ತಜನತೆಯಲ್ಲಿ **ಜ್ಞಾನಮಾರ್ಗಂ** - ತತ್ವಜ್ಞಾನದ ದಾರಿಯನ್ನು **ಆವಿಷ್ಕರ್ತುಕಾಮಂ** - ಪ್ರಕಟಗೊಳಿಸಲು ಬಯಸುವ **ಚಂದ್ರ** - ಚಂದ್ರನೂ **ಇಂದ್ರ** - ಇಂದ್ರನೂ **ರುದ್ರ** - ರುದ್ರನೂ **ದ್ಯುಮಣಿ** - ಸೂರ್ಯನೂ **ಫಣಿನಾಯಕ** - ಸರ್ಪರಾಜನಾದ ಶೇಷನೂ **ವಯೋನಾಯಕ** - ಪಕ್ಷಿರಾಜನಾದ ಗರುಡನೂ **ಆದ್ಯೈಃ** - ಇವರೇ ಮೊದಲಾದವರಿಂದ **ವಂದ್ಯಂ**-ಕೊಂಡಾಡಲ್ಪಡುವ **ಮಂತ್ರಸಿದ್ಧಂ**-ವೇದ ಮಂತ್ರಗಳಲ್ಲಿ ಪ್ರಸಿದ್ಧವಾದ **ಪಾರಮೇಷ್ಠ್ಯಂ ಪದಂ** - ಬ್ರಹ್ಮಪದವಿಯನ್ನು **ಪ್ರಾಪ್ತುಃ**-ಹೊಂದಲಿರುವ **ಮಾರುತಸ್ಯ**-ವಾಯುದೇವನಿಗೂ **ಉತ**-ಮತ್ತು **ಆಪನ್ನಪುಂಸಾಂ**-ಅವನನ್ನು ಶರಣು ಹೊಂದಿದ ಜನರಿಗೂ **ಪಾತಾರಂ**- ರಕ್ಷಕನಾದ **ಮಧು**-ಜೇನಿನಂತೆ ಕರ್ಣಾಮೃತವಾದ **ಆಖ್ಯಂ**-ನಾಮಗಳುಳ್ಳ **ಅವತಾರಂ**-ರಾಮ ಕೃಷ್ಣಾದಿ ಅವತಾರವನ್ನು **ಇಹ**-ಈ ಜಗತ್ತಿನಲ್ಲಿ **ಕೃತವತಃ**-ಮಾಡಿರುವ **ಅಪವಿಪದಃ**-ಆಪತ್ತುಗಳನ್ನು ದೂರಮಾಡುವ **ಅಸ್ಯ**-ಈ ನಿನ್ನ **ಸಂಸ್ತವೇ ಶಕ್ತಃ** - ನಿನ್ನನ್ನು ಸ್ತೋತ್ರ ಮಾಡಲು ನಾನು ಶಕ್ತನಾಗಿದ್ದೇನು **ಕಿಮುತ** - ಹೇಗೆ ತಾನೇ ಆದೀತು ?

ಆದಿ ಕಾರಣನಾದ ಹರಿಯೆ, ಕಲಿಯಿಂದ ಉಂಟಾಗುವ ಅಜ್ಞಾನಾದಿ ದೋಷಗಳಿಂದ ಈ ಭಕ್ತಜನತೆ ಕಲುಷಿತಗೊಂಡಾಗಲೆಲ್ಲ ಅವರಿಗೆ ತತ್ವಜ್ಞಾನದ ಮಾರ್ಗ ತೋರಲು ಬಯಸುವಂಥವುಗಳು ನಿನ್ನ ರಾಮಕೃಷ್ಣವೇದವ್ಯಾಸಾದಿ ಅವತಾರಗಳು ಅವುಗಳನ್ನು ಚಂದ್ರ ಇಂದ್ರ ರುದ್ರ ಸೂರ್ಯ ಶೇಷ ಗರುಡಾದಿ ದೇವತೆಗಳು ಕೊಂಡಾಡುತ್ತಾರೆ ವೇದ ಮಂತ್ರಗಳಲ್ಲಿ ಅವು ಪ್ರಸಿದ್ಧವಾಗಿವೆ ಮುಂದಿನ ಕಲ್ಪದಲ್ಲಿ ಬ್ರಹ್ಮ ಪದವಿಯನ್ನು ಹೊಂದಲಿರುವ ವಾಯುದೇವನಿಗೂ ಅವನನ್ನು ಶರಣು ಹೊಂದಿದ ಸುಗ್ರೀವ ಅರ್ಜುನ ಮುಂತಾದ ಭಕ್ತಜನರಿಗೂ ಈ ಅವತಾರಗಳು ರಕ್ಷಣೆ ನೀಡುತ್ತವೆ ಅವುಗಳ ರಾಮ ಕೃಷ್ಣ ವೇದವ್ಯಾಸಾದಿ ನಾಮಗಳ ಕೇಳಲು ಕಿವಿಗೆ ಬಲು ಇಂಪು, ಜೇನಿನಂತೆ ಸಿಹಿ ಇಂಥ ಅವತಾರಗಳನ್ನು ಮಾಡಿದವನು ನೀನು ಸಜ್ಜನರ ಆಪತ್ತುಗಳನ್ನು ದೂರ ಮಾಡಿದವನು ನೀನು ನಿನ್ನ ಪಾದ ಧೂಳಿ ಕಣಗಳನ್ನೇ ವರ್ಣನಾತೀತವೆಂದು ಬೇರೆ ಹೇಳಬೇಕೇನು ?

**ವಾಯುದೇವ, ನಿನ್ನ ಮಹಿಮೆಯನ್ನು ಏನೆಂದು ಬಣ್ಣಿಸಲಿ ?**

**ಕಲಿಮಲಕಲುಷೇ** - ಕಲಿಯಿಂದಾದ ಅಜ್ಞಾನಾದಿ ದೋಷಗಳಿಂದ ಕಲುಷಿತವಾದ **ಅಸ್ಮಿನ್ ಜನೇ** - ಈ ಭಕ್ತ ಜನತೆಯಲ್ಲಿ **ಜ್ಞಾನಮಾರ್ಗಂ** - ತತ್ವಜ್ಞಾನದ ದಾರಿಯನ್ನು **ಆವಿಷ್ಕರ್ತುಕಾಮಂ**-ಪ್ರಕಟಗೊಳಿಸಲು ಬಯಸುವ **ಚಂದ್ರ**-ಚಂದ್ರನೂ **ಇಂದ್ರ** - ಇಂದ್ರನೂ **ರುದ್ರ** - ರುದ್ರನೂ **ದ್ಯುಮಣಿ** - ಸೂರ್ಯನೂ **ಫಣಿನಾಯಕ** - ಸರ್ಪರಾಜನಾದ ಶೇಷನೂ **ವಯೋನಾಯಕ** - ಪಕ್ಷಿರಾಜನಾದ ಗರುಡನೂ **ಆದ್ಯೈಃ** - ಇವರೆ ಮುಂತಾದವರಿಂದ **ವಂದ್ಯಂ** - ಕೊಂಡಾಡಲ್ಪಡುವ **ಮಂತ್ರಸಿದ್ಧಂ** - ವೇದಮಂತ್ರಗಳಲ್ಲಿ ಪ್ರಸಿದ್ಧವಾದ **ಆಪನ್ನಪುಂಸಾಂ** - ಶರಣು ಹೊಂದಿದ ಜನರಿಗೆ **ತ್ರಾತಾರಂ** - ರಕ್ಷಕವಾದ **ಮಧ್ವ** - ಮಧ್ವ ಎಂಬ **ಆಖ್ಯಂ** - ನಾಮ ಉಳ್ಳ **ಅವತಾರಂ** - ಅವತಾರವನ್ನು **ಅದ್ಯ** - ಈ ಕಲಿಯುಗದಲ್ಲಿ **ಇಹ** - ಈ ಭರತಭೂಮಿಯಲ್ಲಿ **ಕೃತವತಃ** ಮಾಡಿರುವ **ಪಾರಮೇಷ್ಠ್ಯಂ ಪದಂ** - ಬ್ರಹ್ಮ ಪದವಿಯನ್ನು **ಪ್ರಾಪ್ತುಃ** - ಹೊಂದಲಿರುವ **ಅಪವಿಪದಃ** - ಆಪತ್ತುಗಳನ್ನು ದೂರಮಾಡುವ **ಮಾರುತಸ್ಯ ಅಸ್ಯ**-ವಾಯುದೇವನಾದ ಈ ನಿನ್ನ **ಪರಿಸ್ತುತೇ ಶಕ್ತಃ ನಾಸ್ಮಿ**-ಸ್ತೋತ್ರ

ಮಾಡುವುದರಲ್ಲಿ ನಾನು ಶಕ್ತನಾಗಿಲ್ಲ ಎಂದು **ಕಿಮುತ**-ಬೇರೇನು ಹೇಳಬೇಕು ?

ವಾಯುದೇವ, ಕಲಿಯಿಂದ ಉಂಟಾಗುವ ಅಜ್ಞಾನಾದಿ ದೋಷಗಳಿಂದ ಈ ಭಕ್ತಜನತೆ ಕಲುಷಿತಗೊಂಡಿತೆಂದು ಅವರಿಗೆ ತತ್ವಜ್ಞಾನದ ಮಾರ್ಗ ತೋರಲು ಬಯಸಿ ಬಂದುದು ನಿನ್ನ ಮಧ್ವಾವತಾರ ಅದನ್ನು ಚಂದ್ರ ಇಂದ್ರ ರುದ್ರ ಸೂರ್ಯ ಶೇಷ ಗರುಡಾದಿ ದೇವತೆಗಳು ಕೊಂಡಾಡುತ್ತಾರೆ ಬಳಿತ್ಥಾದಿ ವೇದಮಂತ್ರಗಳಲ್ಲಿ ಅದು ಪ್ರಸಿದ್ಧವಾಗಿದೆ ಶರಣು ಹೊಂದಿದ ಭಕ್ತಜನರಿಗೆ ರಕ್ಷಕವಾಗಿದೆ ಇಂಥ ಮಧ್ವಾವತಾರವನ್ನು ನೀನು ಈ ಕಲಿಯುಗದಲ್ಲಿ ಈ ಭರತ ಭೂಮಿಯಲ್ಲಿ ಮಾಡಿರುವಿ ಮುಂದಿನ ಕಲ್ಪದಲ್ಲಿ ಬ್ರಹ್ಮ ಪದವಿಯನ್ನು ಹೊಂದಲಿರುವಿ. ಭಕ್ತರ ಆಪತ್ತುಗಳನ್ನು ದೂರ ಮಾಡುತ್ತಿರುವಿ ನಿನ್ನ ಪಾದ ಧೂಳಿಗಳನ್ನೆ ವರ್ಣಿಸಲು ಅಶಕ್ತನಾದವ ನಾನು ಎಂದ ಮೇಲೆ ನಿನ್ನನ್ನು ವರ್ಣಿಸಲಾರೆ ಎಂದು ಬೇರ ಹೇಳಬೇಕೇನು ?

-೫-

**ಉದ್ಯದ್ವಿದ್ಯುತ್ಪ್ರಚಂಡಾಂ**
**ನಿಜರುಚಿನಿಕರ ವ್ಯಾಪ್ತಲೋಕಾವಕಾಶೋ**
**ಬಿಭ್ರದ್ಭೀಮೋ ಭುಜೇ ಯೋಽ**
**ಭ್ಯುದಿತದಿನಕರಾಭಾಂಗದಾಢ್ಯಪ್ರಕಾಂಡೇ ।**
**ವೀರ್ಯೋದ್ಧಾರ್ಯಾಂ ಗದಾಗ್ರ್ಯಾಂ**
**ಅಯಮಿಹ ಸುಮತಿಂ ವಾಯುದೇವೋ ವಿದಧ್ಯಾತ್**
**ಅಧ್ಯಾತ್ಮಜ್ಞಾನನೇತಾ**
**ಯತಿವರಮಹಿತೋ ಭೂಮಿಭೂಷಾಮಣಿರ್ಮೇ ॥**

**ಹರಿ, ಎನಗೆ ಸನ್ಮತಿ ನೀಡು .**

**ಉದ್ಯತ್** - ಉದಿಸುವ **ವಿದ್ಯುತ್** - ಮಿಂಚಿನಂತೆ **ಪ್ರಚಂಡಾಂ** - ತೀಕ್ಷ್ಣವಾದ **ವೀರ್ಯ**-ಶಕ್ತಿಯಿಂದ ಮಾತ್ರ **ಉದ್ಧಾರ್ಯಾಂ**-ಎತ್ತಲು ಸಾಧ್ಯವಾಗುವ **ಗದಾಗ್ರ್ಯಾಂ** - ಕೌಮೋದಕೀ ಎಂಬ ಶ್ರೇಷ್ಠ ಗದೆಯನ್ನು **ಅಭ್ಯುದಿತ**-ಉದಿಸಿ ಬರುತ್ತಿರುವ **ದಿನಕರ**-ಸೂರ್ಯನಂತೆ **ಆಭ**-ಕಾಂತಿಉಳ್ಳ

**ಅಂಗದ**-ತೋಳಬಂದಿಯಿಂದ **ಆಢ್ಯ**-ಶೋಭಿಸುವ **ಪ್ರಕಾಂಡೇ**-ಶ್ರೇಷ್ಠವಾದ **ಭುಜೇ**-ತೋಳಿನಲ್ಲಿ **ಬಿಭ್ರತ್**-ಧರಿಸಿರುವ **ನಿಜರುಚಿನಿಕರ**-ತನ್ನ ಕಾಂತಿ ಪುಂಜದಿಂದ **ವ್ಯಾಪ್ತಲೋಕಾವಕಾಶಃ**-ಲೋಕದ ಎಲ್ಲ ಪ್ರದೇಶವನ್ನೂ ವ್ಯಾಪಿಸಿರುವ **ಭೀಮಃ**-ಸಕಲ ಶಾಸ್ತ್ರಾಧಾರನಾದ **ಅಧ್ಯಾತ್ಮಜ್ಞಾನ**-ಪರಮಾತ್ಮ ತತ್ವಜ್ಞಾನಕ್ಕೆ **ನೇತಾ**-ನೇತಾರನಾದ **ಯತಿವರಮಹಿತಃ**-ಸನಕಾದಿ ಯತಿಶ್ರೇಷ್ಠರಿಂದ ಪೂಜಿತನಾದ **ಯಃ**- ಯಾವ ನೀನು **ಭೂಮಿ**-ಭೂಮಿಗೆ **ಭೂಷಾಮಣಿಃ** - ಅಲಂಕಾರ ರತ್ನದಂತಿರುವಿಯೋ **ವಾಯುದೇವಃ** - ವಾಯುವಿಗೂ ದೇವನಾದ **ಅಯಂ ಭವಾನ್**-ಈ ನೀನು **ಮೇ**-ನನಗೆ **ಇಹ**-ನಿನ್ನ ಸ್ತೋತ್ರ ಮಾಡುವುದರಲ್ಲಿ **ಸುಮತಿಂ**-ಒಳ್ಳೆಯ ಸ್ಫೂರ್ತಿಯನ್ನು **ವಿದಧ್ಯಾತ್**- ಉಂಟುಮಾಡು

ಹರಿ, ನೀನು ಉದಿಸುವ ಮಿಂಚಿನಂತೆ ಹೊಳೆವ, ಶಕ್ತಿಯಿಂದ ಮಾತ್ರ ಎತ್ತಲು ಸಾಧ್ಯವಾಗುವ ಕೌಮೋದಕಿ ಎಂಬ ಶ್ರೇಷ್ಠ ಗದೆಯನ್ನು ಉದಿಸುವ ಸೂರ್ಯನಂತೆ ಹೊಳೆವ ತೋಳಬಂದಿಯಿಂದ ಶೋಭಿಸುವ ಶ್ರೇಷ್ಠವಾದ ಭುಜದಲ್ಲಿ ಧರಿಸಿದವನು ಶರೀರಕಾಂತಿಯಿಂದ ಲೋಕದ ಎಲ್ಲ ಪ್ರದೇಶವನ್ನೂ ವ್ಯಾಪಿಸಿದವನು ಸಕಲ ಶಾಸ್ತ್ರಾಧಾರ ಪರಮಾತ್ಮ ತತ್ವಜ್ಞಾನವನ್ನು ಲೋಕಕ್ಕೆ ತಂದುಕೊಡುವವನು ಸನಕಾದಿ ಯತಿಗಳಿಂದ ಪೂಜಿತನಾದವನು ಭೂಮಿಗೆ ಅಲಂಕಾರ ರತ್ನದಂತಿರುವವನು ವಾಯುವಿಗೂ ವಂದ್ಯನಾದ ದೇವನೆನಿಸಿರುವವನು ಇಂಥ ನೀನು ನನ್ನೊಳಗೆ ನಿಂತು ಸ್ಫೂರ್ತಿ ನೀಡಿ ನಿನ್ನನ್ನು ನೀನೆ ನನ್ನ ಮೂಲಕ ಸ್ತೋತ್ರ ಮಾಡಿಕೊಳ್ಳು

**ವಾಯುದೇವ, ಎನಗೆ ಸನ್ಮತಿ ನೀಡು :**

**ಉದ್ಯತ್**-ಉದಿಸುವ **ವಿದ್ಯುತ್**-ಮಿಂಚಿನಂತೆ **ಪ್ರಚಂಡಾಂ**-ತೀಕ್ಷ್ಣವಾದ **ವೀರ್ಯ**-ಶಕ್ತಿಯಿಂದ ಮಾತ್ರ **ಉದ್ಧಾರ್ಯಾಂ**-ಎತ್ತಲು ಸಾಧ್ಯವಾಗುವ **ಗದಾಗ್ರ್ಯಾಂ**- ಶ್ರೇಷ್ಠಗದೆಯನ್ನು **ಅಭ್ಯುದಿತ**-ಉದಿಸಿರುವ **ದಿನಕರ**-ಸೂರ್ಯನಂತೆ **ಆಭ**-ಕಾಂತಿಯುಳ್ಳ **ಅಂಗದ**-ತೋಳಬಂದಿಯಿಂದ **ಆಢ್ಯ**-ಶೋಭಿಸುವ **ಪ್ರಕಾಂಡೇ**-ಶ್ರೇಷ್ಠವಾದ **ಭುಜೇ**-ತೋಳಿನಲ್ಲಿ **ಬಿಭ್ರತ್**-ಧರಿಸಿರುವ **ನಿಜರುಚಿನಿಕರ**-ತನ್ನ ಕಾಂತಿ ಪುಂಜದಿಂದ

**ವ್ಯಾಪ್ತಲೋಕಾವಕಾಶಃ** - ಲೋಕದ ಎಲ್ಲ ಪ್ರದೇಶವನ್ನೂ ವ್ಯಾಪಿಸಿದ **ಭೀಮಃ**-ಭೀಮಸೇನನಾಗಿ **ಯಃ** - ಯಾವ **ಭವಾನ್** - ನೀನು **ಭೂಮಿಭೂಷಾಮಣಿಃ** - ಭೂಮಿಗೆ ಅಲಂಕಾರ ರತ್ನದಂತಿದ್ದನೋ, **ಅಧ್ಯಾತ್ಮಜ್ಞಾನ** - ಪರಮಾತ್ಮ ತತ್ವಜ್ಞಾನಕ್ಕೆ **ನೇತಾ** - ನೇತಾರನಾದ **ಯತಿವರ** - ವಿಷ್ಣುತೀರ್ಥ ಪದ್ಮನಾಭತೀರ್ಥಾದಿ ಯತಿ ಶ್ರೇಷ್ಠರಿಂದ **ಮಹಿತಃ** - ಪೂಜಿತನಾದ **ವಾಯುದೇವಃ** - ವಾಯುದೇವನಾದ **ಅಯಂ ಭವಾನ್** - ಈ ನೀನು **ಮೇ** - ನನಗೆ **ಇಹ** - ನಿನ್ನನ್ನು ಸ್ತೋತ್ರ ಮಾಡುವುದರಲ್ಲಿ **ಸುಮತಿಂ** - ಒಳ್ಳೆಯ ಸ್ಫೂರ್ತಿಯನ್ನು **ವಿದಧ್ಯಾತ್** - ಉಂಟುಮಾಡು

ವಾಯುದೇವ ನೀನು ಬಡಿಸುವ ಮಿಂಚಿನಂತೆ ಹೊಳೆವ ಶಕ್ತಿಯಿಂದ ಮಾತ್ರ ಎತ್ತಲು ಸಾಧ್ಯವಾಗುವ ಶ್ರೇಷ್ಠಗದೆಯನ್ನು ಬಡಿಸುವ ಸೂರ್ಯನಂತೆ ಹೊಳೆವ ತೋಳುಗಳಿಂದ ಶೋಭಿಸುವ ಶ್ರೇಷ್ಠವಾದ ಭುಜದಲ್ಲಿ ಧರಿಸಿ ತನ್ನ ಶರೀರಕಾಂತಿಯಿಂದ ಲೋಕದ ಎಲ್ಲ ಪ್ರದೇಶವನ್ನೂ ವ್ಯಾಪಿಸಿದ ಭೀಮಸೇನನಾಗಿ ಹಿಂದೆ ದ್ವಾಪರದಲ್ಲಿ ಈ ಭೂಮಿಗೆ ಅಲಂಕಾರ ರತ್ನದಂತಿದ್ದ ಕಲಿಯುಗದಲ್ಲಿ ಮಧ್ವಾವತಾರ ಮಾಡಿ ಪರಮಾತ್ಮ ತತ್ವಜ್ಞಾನವನ್ನು ಲೋಕಕ್ಕೆ ತಿಳಿಸಿಕೊಡುತ್ತ ವಿಷ್ಣುತೀರ್ಥ ಪದ್ಮನಾಭತೀರ್ಥಾದಿ ಯತಿ ಶ್ರೇಷ್ಠರಿಂದ ಪೂಜಿತನಾದ ವಾಯುದೇವ ನೀನೆ ನೀನೆ ನನಗೆ ನಿನ್ನನ್ನು ಸ್ತೋತ್ರ ಮಾಡುವುದರಲ್ಲಿ ಒಳ್ಳೆಯ ಸ್ಫೂರ್ತಿ ಉಂಟುಮಾಡಿಕೊಡಬೇಕು

-ಶ್ರೀ-

**ಸಂಸಾರೋತ್ತಾಪನಿತ್ಯೋ -**
**ಪಶಮದಸದಯಸ್ನೇಹಹಾಸಾಂಬುಪೂರ -**
**ಪ್ರೋದ್ಯದ್ವಿದ್ಯಾನವದ್ಯ -**
**ದ್ಯುತಿಮಣಿಕಿರಣಶ್ರೇಣಿಸಂಪೂರಿತಾಶಃ।**
**ಶ್ರೀವತ್ಸಾಂಕಾಧಿವಾಸೋ-**
**ಚಿತತರಸರಲ ಶ್ರೀಮದಾನಂದತೀರ್ಥ-**

**ಕ್ಷೀರಾಂಭೋಧಿರ್ವಿಭಿಂದ್ಯಾದ್**
**ಭವದನಭಿಮತಂ ಭೂರಿ ಮೇ ಭೂತಿಹೇತುಃ** ||

## ಹರಿ, ನೀನೆ ಒಂದು ಕ್ಷೀರಸಾಗರ

**ಸಂಸಾರ**-ಸಂಸಾರದಲ್ಲಿ ಉಂಟಾಗುವ **ಉತ್ತಾಪ**-ಮಹಾತಾಪಕ್ಕೆ **ನಿತ್ಯ**-ಶಾಶ್ವತವಾದ **ಉಪಶಮ** - ಪರಿಹಾರವನ್ನು **ದ** - ಕೊಡಬಲ್ಲ **ಸದಯ**-ದಯೆಯಿಂದ ಕೂಡಿದ **ಸ್ನೇಹ** - ಭಕ್ತವಾತ್ಸಲ್ಯದಿಂದ ಉಂಟಾದ **ಹಾಸ**-ನಗುವೆಂಬ **ಅಂಬು ಪೂರ** - ಜಲ ಪ್ರವಾಹ ಉಳ್ಳ **ಪ್ರೋದ್ಯದ್** - ಉದಿಸುವ **ವಿದ್ಯಾ** - ಶಾಸ್ತ್ರಗಳೆಂಬ **ಅನವದ್ಯ** - ದೋಷರಹಿತವಾದ **ದ್ಯುತಿ** - ಕಾಂತಿ ಉಳ್ಳ **ಮಣಿ** - ರತ್ನಗಳ **ಕಿರಣ** - ಕಿರಣಗಳ **ಶ್ರೇಣಿ** - ಸಮೂಹದಿಂದ **ಸಂಪೂರಿತ**-ವ್ಯಾಪ್ತವಾದ **ಆಶಃ**-ದಿಕ್ಕುಗಳುಳ್ಳ **ಭೂತಿ**-ಸಂಪತ್ತಿಗೆ **ಹೇತುಃ**-ಕಾರಣವಾದ **ಶ್ರೀವತ್ಸ**-ಶ್ರೀವತ್ಸವೆಂಬ **ಅಂಕಾ**-ವಾಸದ ಚಿಹ್ನೆ ಉಳ್ಳ ಮಹಾಲಕ್ಷ್ಮಿಯ **ಅಧಿವಾಸ** - ವಾಸಕ್ಕೆ **ಉಚಿತತರ** - ಅತ್ಯಂತ ಉಚಿತವಾದ **ಸರಲ**-ಮನೋಹರವಾದ **ಶ್ರೀಮದ್**-ಶಮದಮಾದಿ ಸಂಪನ್ನರಿಗೆ **ಆನಂದ**-ಆನಂದಕರವಾದ **ತೀರ್ಥ**-ಶಾಸ್ತ್ರ ರಚಿಸಿ ಉಪದೇಶಿಸುವ ವೇದವ್ಯಾಸರೆಂಬ **ಕ್ಷೀರಾಂಭೋಧಿಃ**-ಕ್ಷೀರಸಾಗರವು **ಮೇ**-ನನಗೆ **ಭವತ್**-ಉಂಟಾಗುವ **ಭೂರಿ**-ಬಹಳವಾದ **ಅನಭಿಮತಂ**-ಅನಿಷ್ಟವನ್ನು **ವಿಭಿಂದ್ಯಾತ್**-ಪರಿಹರಿಸಲಿ

ಕ್ಷೀರಸಾಗರವು ಬಿಸಿಲಿನಿಂದಾದ ತಾಪವನ್ನು ತತ್ಕಾಲಕ್ಕೆ ಪರಿಹರಿಸುತ್ತದೆ ಬೆಳ್ಳಗಿನ ಜಲಪ್ರವಾಹದಿಂದ ಕೂಡಿದೆ ತನ್ನಲ್ಲಿರುವ ರತ್ನಗಳ ಪ್ರಕಾಶದಿಂದ ದಿಕ್ಕುಗಳನ್ನೆಲ್ಲ ತುಂಬುತ್ತದೆ ಹರಿಯ ಎದೆಯಲ್ಲಿ ಶ್ರೀವತ್ಸ ಚಿಹ್ನೆ ವಾಸಕ್ಕಾಗಿ ಉಳ್ಳವಳು ಮಹಾಲಕ್ಷ್ಮಿ ಅವಳ ವಾಸಸ್ಥಾನಗಳಲ್ಲೆಲ್ಲ ಕ್ಷೀರಸಾಗರವೆ ಶ್ರೇಷ್ಠ ಏಕೆಂದರೆ 'ಭೂತಿ' ಎನಿಸಿದ ಮಹಾಲಕ್ಷ್ಮಿಯ ತವರುಮನೆ, ಪ್ರಾದುರ್ಭಾವ ಸ್ಥಳ ಈ ಕ್ಷೀರಸಾಗರವೆ

'ಸೋऽಯಂ ವ್ಯಾಸಸುಧಾಸಿಧಿರ್ಭವತು ಮೇ ಭೂತ್ಯೈ ಸತಾಂ ಭೂತಿದ' ಎನ್ನುವಂತೆ ವೇದವ್ಯಾಸರೂ ಸ್ವಯಂ ಇನ್ನೊಂದು ಕ್ಷೀರಸಾಗರ ಈ ಕ್ಷೀರಸಾಗರ ಸಂಸಾರದಲ್ಲಿ ಸಂಭವಿಸುವ ಮಹತ್ತಾದ ತಾಪತ್ರಯಗಳಿಗೆಲ್ಲ ಶಾಶ್ವತ ಪರಿಹಾರ

ನೀಡಬಲ್ಲುದು ಭಕ್ತರ ಮೇಲಿನ ದಯೆ ಮತ್ತು ವಾತ್ಸಲ್ಯಗಳಿಂದ ಹೊರಸೂಸುವ ಬೆಳ್ಳಗಿನ ಮಂದಹಾಸವೆಂಬ ನೀರಿನ ಪ್ರವಾಹದಿಂದ ಕೂಡಿರುತ್ತದೆ ಸದಾ ಉದಿಸುತ್ತಲೆ ಇರುವ ಶಾಸ್ತ್ರಗಳೆಂಬ ಉಜ್ಜ್ವಲವಾದ ಮಣಿಗಳ ಕಿರಣಗಳಿಂದ ದಿಕ್ಕುಗಳನ್ನೆಲ್ಲ ಬೆಳಗಿಸುತ್ತದೆ ವೇದವ್ಯಾಸರ ಎದೆಯಲ್ಲಿರುವ ಶ್ರೀವತ್ಸವು ಮಹಾಲಕ್ಷ್ಮಿಯ ನಿತ್ಯ ಸನ್ನಿಧಾನದ ಚಿಹ್ನೆ ಇಂಥ ಚಿಹ್ನೆಯಿಂದ ತಿಳಿಯಲು ಬರುವ ಮಹಾಲಕ್ಷ್ಮಿಯ ವಾಸಕ್ಕೆ ಅತ್ಯಂತ ಯೋಗ್ಯವೂ ಮನೋಹರವೂ ಆದ ಸ್ಥಾನವೆಂದರೆ ವೇದವ್ಯಾಸರೆಂಬ ಕ್ಷೀರಸಾಗರ ಅದು ಭೂತಿ ಅಂದರೆ ಮೋಕ್ಷಾದಿ ಸಕಲ ಸಂಪತ್ತುಗಳಿಗೂ ಮೂಲ ಕಾರಣವಾದುದು ಇಂಥ ಕ್ಷೀರಸಾಗರ ನನ್ನ ಎಲ್ಲ ಮಹಾ ಅನಿಷ್ಟಗಳನ್ನೂ ಪರಿಹರಿಸಲಿ

**ವಾಯುದೇವ, ನೀನೂ ಇನ್ನೊಂದು ಕ್ಷೀರಸಾಗರ** ·

**ಸಂಸಾರ**-ಸಂಸಾರದಲ್ಲಿ ಉಂಟಾಗುವ **ಉತ್ತಾಪ**-ಮಹಾತಾಪಕ್ಕೆ **ನಿತ್ಯ**-ಶಾಶ್ವತವಾದ **ಉಪಶಮ**-ಪರಿಹಾರವನ್ನು **ದ**-ಕೊಡಬಲ್ಲ **ಸದಯ**-ದಯೆಯಿಂದ ಕೂಡಿದ **ಸ್ನೇಹ**-ವಾತ್ಸಲ್ಯದಿಂದ ಉಂಟಾದ **ಹಾಸ**-ನಗುವೆಂಬ **ಅಂಬುಪೂರ**-ಜಲಪ್ರವಾಹ ಉಳ್ಳ **ಪ್ರೋದ್ಯದ್**-ಉದಿಸುವ **ವಿದ್ಯಾ**-ಶಾಸ್ತ್ರಗಳೆಂಬ **ಅನವದ್ಯ**-ದೋಷರಹಿತವಾದ **ದ್ಯುತಿ**-ಕಾಂತಿ ಉಳ್ಳ **ಮಣಿ**-ರತ್ನಗಳ **ಕಿರಣ**-ಕಿರಣಗಳ **ಶ್ರೇಣಿ**-ಸಮೂಹದಿಂದ **ಸಂಪೂರಿತ** ತುಂಬಲ್ಪಟ್ಟ **ಆಶಃ**-ದಿಕ್ಕುಗಳುಳ್ಳ **ಭೂತಿ**-ಜ್ಞಾನಭಕ್ತ್ಯಾದಿ ಸಂಪತ್ತಿಗೆ **ಹೇತುಃ**-ಕಾರಣವಾದ **ಶ್ರೀವತ್ಸಾಂಕ**-ಶ್ರೀವತ್ಸ ಚಿಹ್ನಉಳ್ಳ ಹರಿಯ **ಅಧಿವಾಸ**- ಅಧಿವಾಸಕ್ಕೆ **ಉಚಿತತರ**-ಅತ್ಯಂತ ಯೋಗ್ಯವಾದ **ಸರಲ**-ಮನೋಹರವಾದ **ಶ್ರೀಮದ್**-ಶಮ ದಮಾದಿ ಸಂಪನ್ನರಾದವರಿಗೆ **ಆನಂದ**-ಆನಂದಕರವಾದ **ತೀರ್ಥ**-ಶಾಸ್ತ್ರಗಳನ್ನು ರಚಿಸಿ ಉಪದೇಶಿಸಿರುವ ಶ್ರೀಮದಾಚಾರ್ಯರೆಂಬ **ಕ್ಷೀರಾಂಭೋಧಿಃ**-ಕ್ಷೀರಸಾಗರವು **ಮೇ**-ನನ್ನ **ಭವತ್**-ಉಂಟಾಗುವ **ಭೂರಿ**-ಬಹಳವಾದ **ಅನಭಿಮತಂ**-ಅನಿಷ್ಟವನು **ವಿಭಿಂದ್ಯಾತ್**-ಪರಿಹರಿಸಲಿ

ಶ್ರೀಮದಾನಂದತೀರ್ಥರೆಂಬ ಕ್ಷೀರಸಾಗರ ನನ್ನ ಮಹಾ ಅನಿಷ್ಟಗಳನ್ನೇ ಪರಿಹರಿಸಲಿ ಈ ಕ್ಷೀರಸಾಗರ ಸಂಸಾರದಲ್ಲಿ ಸಂಭವಿಸುವ ಮಹತ್ತಾ

ತಾಪತ್ರಯಗಳಿಗೆಲ್ಲ ಶಾಶ್ವತ ಪರಿಹಾರ ನೀಡಬಲ್ಲುದು ಭಕ್ತರ ಮೇಲಿನ ದಯೆ ಮತ್ತು ವಾತ್ಸಲ್ಯಗಳಿಂದ ಹೊರಸೂಸುವ ಬೆಳ್ಳಗಿನ ಮಂದಹಾಸವೆಂಬ ನೀರಿನ ಪ್ರವಾಹದಿಂದ ಕೂಡಿರುತ್ತದೆ ಸದಾ ಉದಿಸುತ್ತಲೆ ಇರುವ ಶಾಸ್ತ್ರಗಳೆಂಬ ಉಜ್ವಲವಾದ ಮಣಿಗಳ ಕಿರಣಗಳಿಂದ ದಿಕ್ಕುಗಳನ್ನೆಲ್ಲ ಬೆಳಗಿಸುತ್ತದೆ ಎದೆಯಲ್ಲಿ ಶ್ರೀವತ್ಸ ಚಿಹ್ನೆ ಧರಿಸಿದ ಹರಿಯ ನಿತ್ಯ ಸನ್ನಿಧಾನಕ್ಕೆ ರುದ್ರಾದಿಗಳೆಲ್ಲರಿಗಿಂತಲೂ ಅತ್ಯಂತ ಯೋಗ್ಯ ಸ್ಥಾನವಾಗಿದೆ ಏಕೆಂದರೆ ಕಲ್ಯಾವೇಶರಹಿತವಾಗಿದ್ದು ಮನೋಹರವಾಗಿದೆ 'ಭೂತಿ' ಅಂದರೆ, ಸಕಲ ಸಂಪತ್ತುಗಳಿಗೂ ಕಾರಣವಾಗಿದೆ

'ಸ್ವಾಂತಸ್ಥಾನಂತಶಯ್ಯ'ವಾದ 'ಮಧ್ವಮುಗ್ಧಾಬ್ಧಿ' ಎಂದರೆ ಹೀಗಿದೆ

- ೭ -

**ಮೂರ್ಧನ್ಯೇಷೋಽಂಜಲಿರ್ಮೇ -**
**ದೃಢತರಮಿಹ ತೇ ಬಧ್ಯತೇ ಬಂಧಪಾಶ -**
**ಚ್ಛೇತ್ರೇ ದಾತ್ರೇ ಸುಖಾನಾಂ**
**ಭಜತಿ ಭುವಿ ಭವಿಷ್ಯದ್‌ವಿಧಾತ್ರೇ ದ್ಯುಭರ್ತ್ರೇ ।**
**ಅತ್ಯಂತಂ ಸಂತತಂ ತ್ವಂ**
**ಪ್ರದಿಶ ಪದಯುಗೇ ಹಂತ ಸಂತಾಪಭಾಜಾಂ**
**ಅಸ್ಮಾಕಂ ಭಕ್ತಿಮೇಕಾಂ**
**ಭಗವತ ಉತ ತೇ ಮಾಧವಸ್ಯಾಥ ವಾಯೋಃ ॥**

**ಹರಿ, ಎನಗೆ ನಿನ್ನಲ್ಲಿ ಭಕ್ತಿ ನೀಡು ;**

**ಇಹ ಭುವಿ**-ಈ ಭೂಮಿಯಲ್ಲಿ **ಭಜತಿ**-ಸೇವಕರಾದ ಜನರಲ್ಲಿ **ಬಂಧಪಾಶ**- ಭವಪಾಶವನ್ನು **ಛೇತ್ರೇ**-ಛೇದಿಸುವ **ಭವಿಷ್ಯದ್ ವಿಧಾತ್ರೇ** - ಭಾವಿ ಬ್ರಹ್ಮನಾದ **ದ್ಯುಭರ್ತ್ರೇ**-ಭಾರತೀಪತಿಯಾದ ವಾಯುದೇವನಿಗೆ **ಸುಖಾನಾಂ**- ಸಹಭೋಗದ ಸುಖಗಳನ್ನು **ದಾತ್ರೇ**-ಕೊಡುವ **ತೇ**-ನಿನಗೆ

**ಮೇ**-ನನ್ನ **ಏಷಃ ಅಂಜಲಿಃ**-ಈ ಅಂಜಲಿಯು **ಮೂರ್ಧನಿ**-ತಲೆಯಲ್ಲಿ **ಸಂತತಂ**- ಯಾವಾಗಲೂ **ಅತ್ಯಂತಂ**-ಬಹಳವಾಗಿ **ದೃಢತರಂ**-ಒಹು ದೃಢವಾಗಿ **ಬಧ್ಯತೇ**- ಬಂಧಿಸಲ್ಪಡುತ್ತದೆ **ಹಂತ** -ಇದು ಸಂತೋಷಕರ **ತ್ವಂ** - ನೀನು **ಸಂತಾಪ ಭಾಜಾಂ**-ಸಂಸಾರ ತಾಪವನ್ನು ಹೊಂದಿರುವ **ಅಸ್ಮಾಕಂ**-ನಮಗೆ **ಭಗವತಃ**-ಪೂಜ್ಯನಾದ **ವಾಯೋಃ**-ವಾಯುದೇವನ **ಪದಯುಗೇ** - ಎರಡು ಪಾದಗಳಲ್ಲಿಯೂ **ಅಥ** - ಅನಂತರ **ಭಗವತಃ** - ಷಡ್ಗುಣೈಶ್ವರ್ಯ ಸಂಪನ್ನನಾದ **ಮಾಧವಸ್ಯ**-ಲಕ್ಷ್ಮೀ ಪತಿಯಾದ **ತೇ**-ನಿನ್ನ **ಪದಯುಗೇ ಉತ**-ಎರಡು ಪಾದಗಳಲ್ಲಿಯೂ **ಏಕಾಂ**-ಅನನ್ಯವಾದ **ಭಕ್ತಿಂ**-ಭಕ್ತಿಯನ್ನು **ಪ್ರದಿಶ**-ಕೊಡು

ಈ ಕರ್ಮಭೂಮಿಯಲ್ಲಿ ಶ್ರವಣಾದಿ ಸತ್ಕರ್ಮಗಳಿಂದ ನಿನ್ನನ್ನು ಭಜಿಸುವ ಜನರ ಭವಪಾಶದ ಬಂಧನವನ್ನು ನೀನು ಛೇದಿಸುವಿ ನಿನ್ನಾಜ್ಞೆಯಂತೆ ಭಾರತೀಪತಿ ವಾಯುದೇವನೂ ಆ ಕಾರ್ಯವನ್ನು ಮಾಡುತ್ತಾನೆ ಅವನು ಮುಂದಿನ ಕಲ್ಪದಲ್ಲಿ ಬ್ರಹ್ಮ ಪದವಿಯನ್ನು ಹೊಂದಿದಾಗ ಅವನಿಗೆ ಸಹಭೋಗ ನೀಡುವಿ, ಸರ್ವ ಸುಖಗಳನ್ನೂ ನೀಡುವಿ ಇಂಥ ಕರುಣಾ ಸಮುದ್ರನಾದ ನಿನಗೆ ನಾನು ಸದಾ ತಲೆಯ ಮೇಲೆ ಎರಡು ಕೈಗಳನ್ನು ದೃಢವಾಗಿ ಜೋಡಿಸಿ ನಮಸ್ಕರಿಸುವೆನು ಹಾಗೆ ಮಾಡುವ ಪ್ರವೃತ್ತಿ ನನ್ನಲ್ಲಿ ಮೂಡಿರುವುದೆ ಒಂದು ದೊಡ್ಡ ಭಾಗ್ಯವೆಂದು ನಾನು ಸಂತೋಷಿಸುತ್ತೇನೆ ನಿನ್ನನ್ನು ನಮಸ್ಕರಿಸಿ ನಾನು ಬೇಡುವುದಿಷ್ಟೆ ಮೊದಲಿಗೆ ಪೂಜ್ಯ ಆದಿ ಗುರುಗಳಾದ ಮಧ್ವರೂಪಿ ವಾಯುದೇವರ ಎರಡು ಪಾದಗಳಲ್ಲಿ ಅನನ್ಯವಾದ ಭಕ್ತಿ ನೀಡು ಬಳಿಕ ಷಡ್ಗುಣೈಶ್ವರ್ಯಪೂರ್ಣನಾದ ಲಕ್ಷ್ಮೀಪತಿಯಾದ ನಿನ್ನ ಎರಡು ಪಾದಗಳಲ್ಲಿ ಅನನ್ಯವಾದ ಭಕ್ತಿ ನೀಡು ಏಕೆಂದರೆ ಗುರುಭಕ್ತಿಯಿಂದ ಹುಟ್ಟುವ ಹರಿಭಕ್ತಿಯೆ ಸ್ಥಿರವಾಗಿ ನಿಲ್ಲುವಂಥಹುದು, ಫಲಕಾರಿಯಾಗುವಂಥಹುದು.

## ವಾಯುದೇವ, ಎನಗೆ ನಿನ್ನಲ್ಲಿ ಭಕ್ತಿ ನೀಡು

**ಇಹ ಭುವಿ**-ಈ ಭೂಮಿಯಲ್ಲಿ **ಭಜತಿ**-ಸೇವಕರಾದ ಜನರಲ್ಲಿ **ಬಂಧಪಾಶ**- ಭವಪಾಶವನ್ನು **ಛೇತ್ರೇ**-ಛೇದಿಸುವ **ಸುಖಾನಾಂ**-ಸುಖಗಳನ್ನು **ದಾತ್ರೇ**-ಕೊಡುವ **ಭವಿಷ್ಯದ್ ವಿಧಾತ್ರೇ**-ಭಾವಿ ಬ್ರಹ್ಮನಾದ **ದ್ಯುಭರ್ತ್ರೇ**-

ಭಾರತೀಪತಿಯಾದ **ತೇ**-ನಿನಗೆ **ಮೇ**-ನನ್ನ **ಏಷಃ ಅಂಜಲಿಃ**-ಈ ಅಂಜಲಿಯು **ಮೂರ್ಧನಿ**-ತಲೆಯಲ್ಲಿ **ಸಂತತಂ**-ಯಾವಾಗಲೂ **ಅತ್ಯಂತಂ**-ಬಹಳವಾಗಿ **ದೃಢತರಂ**-ಬಹುದೃಢವಾಗಿ **ಬಧ್ಯತೇ**-ಬಂಧಿಸಲ್ಪಡುತ್ತದೆ **ಹಂತ**-ಇದು ಸಂತೋಷಕರ **ತ್ವಂ**-ನೀನು **ಸಂತಾಪಭಾಜಾಂ**-ಸಂಸಾರತಾಪವನ್ನು ಹೊಂದಿರುವ **ಅಸ್ಮಾಕಂ**-ನಮಗೆ **ಭಗವತಃ**-ಪೂಜ್ಯನಾದ **ವಾಯೋಃ**-ವಾಯುದೇವನಾದ **ತೇ**-ನಿನ್ನ **ಪದಯುಗೇ**-ಎರಡು ಪಾದಗಳಲ್ಲಿಯೂ **ಅಥ**-ಅನಂತರ **ಭಗವತಃ**-ಷಡ್ಗುಣೈಶ್ವರ್ಯ ಸಂಪನ್ನನಾದ **ಮಾಧವಸ್ಯ**-ಲಕ್ಷ್ಮೀಪತಿಯಾದ ಶ್ರೀಹರಿಯ **ಪದಯುಗೇ ಉತ**-ಎರಡು ಪಾದಗಳಲ್ಲಿಯೂ **ಏಕಾಂ**-ಅನನ್ಯವಾದ **ಭಕ್ತಿಂ**-ಭಕ್ತಿಯನ್ನು **ಪ್ರದಿಶ**-ಕೊಡು.

ಈ ಕರ್ಮ ಭೂಮಿಯಲ್ಲಿ ಶ್ರವಣಾದಿ ಸತ್ಕರ್ಮಗಳಿಂದ ನಿನ್ನನ್ನು ಸೇವಿಸುವ ಜನರಲ್ಲಿ ಭವಪಾಶದ ಬಂಧನವನ್ನು ಹರಿಯಾಜ್ಞೆಯಿಂದ ಹರಿದೂಗಯುವಿ ಎಲ್ಲ ಸುಖಗಳನ್ನೂ ನೀಡುವಿ ಮುಂದಿನ ಕಲ್ಪದಲ್ಲಿ ಬ್ರಹ್ಮ ಪದವಿಯನ್ನೂ ಆಳುವಿ ಭಾರತೀಪತಿಯಾದ ನಿನಗೆ ನಾನು ಸದಾ ತಲೆಯ ಮೇಲೆ ಎರಡು ಕೈಗಳನ್ನು ಬಹಳ ದೃಢವಾಗಿ ಜೋಡಿಸಿ ನಮಸ್ಕರಿಸುವೆನು ಹಾಗೆ ಮಾಡುವ ಪ್ರವೃತ್ತಿ ನನ್ನಲ್ಲಿ ಮೂಡಿರುವುದೆ ಒಂದು ದೊಡ್ಡ ಭಾಗ್ಯವೆಂದು ನಾನು ಸಂತೋಷಪಡುತ್ತೇನೆ ನಿನ್ನನ್ನು ನಮಸ್ಕರಿಸಿ ನಾನು ಬೇಡುವುದಿಷ್ಟೆ ಮೊದಲಿಗೆ ಪೂಜ್ಯ ಆದಿಗುರು ಮಧ್ವರೂಪಿ ವಾಯುದೇವನಾದ ನಿನ್ನ ಎರಡು ಪಾದಗಳಲ್ಲಿ ಅನನ್ಯ ಭಕ್ತಿ ನೀಡು ಬಳಿಕ ಷಡ್ಗುಣೈಶ್ವರ್ಯ ಪೂರ್ಣನಾದ ಲಕ್ಷ್ಮೀಪತಿಯಾದ ಹರಿಯ ಎರಡು ಪಾದಗಳಲ್ಲಿ ಅನನ್ಯವಾದ ಭಕ್ತಿ ನೀಡು ಏಕೆಂದರೆ ಗುರುಭಕ್ತಿಯಿಂದ ಹುಟ್ಟುವ ಹರಿಭಕ್ತಿಯೆ ಸ್ಥಿರವಾಗಿ ನಿಲ್ಲುವಂಥಹುದು, ಫಲಕಾರಿಯಾಗುವಂಥಹುದು

-೮-

**ಸಾಭ್ರೋಷ್ಣಾಭೀಶುಶುಭ್ರ -**
**ಪ್ರಭಮಭಯ ನಭೋ ಭೂರಿಭೂಭೃದ್ವಿಭೂತಿ-**
**ಭ್ರಾಜಿಷ್ಣುರ್ಭೂರ್ಋಭೂಣಾಂ**
**ಭವನಮಪಿ ವಿಭೋಽಭೇದಿ ಬಭ್ರೇ ಬಭೂವೇ ।**

**ಯೇನ ಭ್ರೂವಿಭ್ರಮಸ್ತೇ -**
**ಭ್ರಮಯತು ಸುಭೃಶಂ ಬಭ್ರುವದ್ದುರ್ಭೃತಾಶಾನ್**
**ಭ್ರಾಂತಿರ್ಭೇದಾವಭಾಸ ಸ್ತ್ವಿತಿ**
**ಭಯಮಭಿಭೂರ್ಭೋಕ್ಷ್ಯತೋ ಮಾಯಿಭಿಕ್ಷೂನ್ ||**

## ಹರಿವಾಯುಗಳೆ, ನಿಮ್ಮ ಹುಬ್ಬಿನ ಕುಣಿತ

**ಅಭಯ**-ಭಯರಹಿತನೆ, **ವಿಭೋ**-ನಮ್ಮ ಭಯಪರಿಹಾರಕ್ಕೆ ಸಮರ್ಥನೆ, **ಅಭ್ರ**-ಮೋಡಗಳೂ **ಉಷ್ಣಾಭೀಶು**-ಸೂರ್ಯನೂ **ಶುಭ್ರಪ್ರಭ**-ಚಂದ್ರನೂ ಇವರಿಂದ **ಸ**-ಕೂಡಿದ **ನಭಃ**-ಅಂತರಿಕ್ಷಲೋಕವೂ **ಭೂರಿ**-ಬಹಳವಾದ **ಭೂಭೃತ್**-ಚಕ್ರವರ್ತಿಗಳ ಮತ್ತು ಪರ್ವತಗಳ **ವಿಭೂತಿ**-ಸಂಪತ್ತುಗಳಿಂದ **ಭ್ರಾಜಿಷ್ಣುಃ**-ಶೋಭಿಸುವ **ಭೂಃ**-ಭೂಲೋಕವೂ **ಋಭೂಣಾಂ**- ದೇವತೆಗಳ **ಭವನಮಪಿ**-ವಾಸಸ್ಥಾನವಾದ ಸ್ವರ್ಗಲೋಕವೂ **ಯೇನ**- ಯಾವುದರಿಂದ **ಅಭೇದಿ**-ಲಯಹೊಂದಿತೋ **ಬಭ್ರೇ**-ಸ್ಥಿತಿ ಪಡೆಯಿತೋ **ಬಭೂವೇ**-ಉತ್ಪತ್ತಿ ಹೊಂದಿತೋ ಅಂಥಹ **ಅಭಿಭೂಃ** -ಶತ್ರುಗಳನ್ನು ದಮನ ಮಾಡುವ **ತೇ**-ನಿನ್ನ **ಭ್ರೂವಿಭ್ರಮಃ**-ಹುಬ್ಬಿನ ಕುಣಿತವು **ಬಭ್ರುವತ್** - ಮುಂಗುಸಿಯಂತೆ **ದುರ್ಭೃತ** - ಧರಿಸಲಾಗದ **ಆಶಾನ್** - ಆಸೆ ಉಳ್ಳ **ಭೇದಾವಭಾಸಃ** - ಭೇದಾನುಭವವು **ಭ್ರಾಂತಿಸ್ತು** - ಕೇವಲ ಭ್ರಮವೆ **ಇತಿ**- ಎಂದು ಹೇಳುತ್ತ **ಭಯಂ**-ಭೀಕರವಾದ ತಮಸ್ಸಿನ ದುಃಖವನು **ಭೋಕ್ಷ್ಯತಃ** - ಮುಂದೆ ಅನುಭವಿಸಲಿರುವ **ಮಾಯಿಭಿಕ್ಷೂನ್** ಮಾಯಾವಾದಿ ಯತಿಗಳನ್ನು **ಸುಭೃಶಂ** - ಚೆನ್ನಾಗಿ **ಭ್ರಮಯತು**- ಭ್ರಾಂತಿಗೊಳಿಸಲಿ

ಹರಿವಾಯುಗಳೆ, ನೀವು ಭಯರಹಿತರು ಭಕ್ತರ ಭಯವನ್ನು ಪರಿಹರಿಸಲು ಸಮರ್ಥರು ಮೋಡಗಳಿಂದಲೂ ಸೂರ್ಯಚಂದ್ರರಿಂದಲೂ ಕೂಡಿದ ಅಂತರಿಕ್ಷ ಲೋಕ, ಚಕ್ರವರ್ತಿಗಳ ಸಂಪತ್ತುಗಳಿಂದಲೂ ಪರ್ವತಗಳ ಸಂಪತ್ತುಗಳಿಂದಲೂ ಯುಕ್ತವಾದ ಭೂಲೋಕ, ದೇವತೆಗಳ ವಾಸಸ್ಥಾನವಾದ ಸ್ವರ್ಗಲೋಕ ಹೀಗೆ ಮೂರುಲೋಕವೂ ನಿಮ್ಮ ಹುಬ್ಬಿನ ಕುಣಿತ ಒಂದರಿಂದಲೆ

ಪ್ರಲಯ ಸ್ಥಿತಿ ಉತ್ಪತ್ತಿಗಳನ್ನು ಕಾಲ ಕಾಲಕ್ಕೆ ಹೊಂದುತ್ತಿವೆ ನೀವು ಸೃಷ್ಟಿಸಿ ರಕ್ಷಿಸಿ ಲಯ ಮಾಡುತ್ತಿರುವ ಈ ಪ್ರಪಂಚವನ್ನೇ ಸುಳ್ಳು ಎನ್ನುವ ಮಾಯಾವಾದಿಗಳು ತಮ್ಮದೆ ಸಿದ್ಧಾಂತವೆನ್ನುವ ಯಶಸ್ಸನ್ನು ಹೊಂದಲು ಬಯಸಿದ್ದಾರೆ ಅವರ ಈ ಆಸೆ ಸಜ್ಜನರ ಮೇಲಿನ ತಮ್ಮ ಕರುಣೆಯಿಂದಾಗಿ ಇಂದು ಹುಸಿಯಾಗಿದೆ ತತ್ವವಾದ ಅವರ ಮೇಲೆ ವಿಜಯ ಸಂಪಾದಿಸಿದ

ಮುಂಗುಸಿ ತಾನು ಹಾವಿನೊಡನೆಯೂ ಸರಸವಾಡಬಲ್ಲೆ ಎಂದುಕೊಂಡು ತನಗೆ ಯಾರೂ ಇದಿರಿಲ್ಲವೆಂಬ ಯಶಸ್ಸನ್ನು ಹೊಂದಲು ಬಯಸಿದರೂ ಅದು ಒಂದು ಸಾಮಾನ್ಯ ಬೆಕ್ಕು ಇದಿರಾದರೂ ಸೋಲುತ್ತದೆ ಅದಕ್ಕೆ ಆಹಾರವಾಗುತ್ತದೆ

ನಕುಲೋ ಮೂಷಿಕಾನತ್ತಿ ಬಿಡಾಲೋ ನಕುಲಂ ತಥಾ ।

(ಮ ಭಾರತ ಶಾಂತಿ ೧೫-೨೦)

ಈ ಮಾಯಾವಾದಿಗಳೂ ಹಾಗೆಯೇ ಅವರ ಆಸೆ ಸುಳ್ಳಾಗಿದೆ

ಆದರೂ ಪ್ರತ್ಯಕ್ಷಸಿದ್ಧವಾದ ಶ್ರುತಿಸ್ಮೃತಿ ಸಮ್ಮತವಾದ ಭೇದಾನುಭವವನ್ನು ನಿಷ್ಕಾರಣವಾಗಿ ಕೇವಲ ಭ್ರಮವೆನ್ನುತ್ತಾ ಇವರು ಮುಂದೆ ತಮಸ್ಸಿನಲ್ಲಿ ಭೀಕರವಾದ ಮಹಾ ದುಃಖ ಅನುಭವಿಸಲಿದ್ದಾರೆ ಅವರು ಭೇದಾನುಭವ ಭ್ರಾಂತಿ ಎನ್ನುವ ಈ ಭ್ರಮದಲ್ಲಿ ಸಜ್ಜನರನ್ನು ತಾವು ಬೀಳಿಸಬಲ್ಲೆವೆಂದು ತಿಳಿದಿದ್ದಾರೆ ಅವರ ಈ ಗ್ರಹಿಕೆಯನ್ನು ನೀವು ಭ್ರಾಂತಿಯನ್ನಾಗಿಸಿ ಅವರನ್ನು ಭ್ರಾಂತರನ್ನಾಗಿ ಮಾಡಿರಿ

– ೭ –

**ಯೋಽಮುಂ ಭಾವಂ ಭಜಂತೇ**

**ಸುರಮುಖಸುಜನಾರಾಧಿತಂ ತೇ ತೃತೀಯಂ**

**ಭಾಸಂತೇ ಭಾಸುರೈಸ್ತೇ**

**ಸಹಚರಚಲಿತೈಶ್ಚಾಮರೈಶ್ಚಾರುವೇಷಾಃ ।**

**ವೈಕುಂಠೇ ಕಂಠಲಗ್ನ**
**ಸ್ಥಿರಶುಚಿವಿಲಸತ್ಕಾಂತಿತಾರುಣ್ಯಲೀಲಾ -**
**ಲಾವಣ್ಯಾಪೂರ್ಣಕಾಂತಾ-**
**ಕುಚಭರಸುಲಭಾಶ್ಲೇಷಸಂಮೋದಸಾಂದ್ರಾಃ ||**

## ಹರಿವಾಯುಗಳೆ, ನಿಮ್ಮ ಮೂರನೇ ಅವತಾರ ಮುಕುತಿಗೆ ಹರಿಕಾರ

**ಯೇ**-ಯಾರು **ಸುರಮುಖ**-ದೇವತೆಗಳೆ ಮೊದಲಾದ **ಸುಜನ**-ಸಜ್ಜನರಿಂದ **ಆರಾಧಿತಂ**-ಆರಾಧಿಸಲ್ಪಟ್ಟ **ತೇ**-ನಿಮ್ಮ **ಅಮುಂ ತೃತೀಯಂ ಭಾವಂ**- ಈ ಮೂರನ ಅವತಾರವನ್ನು **ಭಜಂತೇ**-ಸೇವಿಸುವರೋ **ತೇ**-ಅವರು **ವೈಕುಂಠೇ**-ವೈಕುಂಠದಲ್ಲಿ **ಚಾರುವೇಷಾಃ**-ಸುಂದರ ವೇಷ ತೊಟ್ಟು **ಕಂಠಲಗ್ನ**-ಕುತ್ತಿಗೆಯನ್ನು ಒಳಸುವ **ಸ್ಥಿರ**-ಸ್ಥಿರವಾದ **ಶುಚಿ**-ಶುಚಿಯಾದ **ವಿಲಸತ್**-ಶೋಭಿಸುವ **ಕಾಂತಿ**-ಹೊಳಪು **ತಾರುಣ್ಯ**-ತಾರುಣ್ಯವು **ಲೀಲಾ**- ವಿಲಾಸವು **ಲಾವಣ್ಯ**-ಲಾವಣ್ಯವು ಇವುಗಳಿಂದ **ಆಪೂರ್ಣ**-ಚೆನ್ನಾಗಿ ತುಂಬಿಕೊಂಡಿರುವ **ಕಾಂತಾ**-ಕಾಂತೆಯರ **ಕುಚಭರ**-ಸ್ತನಭಾರದ **ಸುಲಭ**-ಸುಲಭವಾಗಿ ಸಿಗುವ **ಆಶ್ಲೇಷ**-ಆಲಿಂಗನದ **ಸಂಮೋದ**- ಸೌಖ್ಯದಿಂದ **ಸಾಂದ್ರಾಃ**-ತುಂಬಿದವರಾಗಿ **ಸಹಚರ**-ಸೇವಕರಿಂದ **ಚಲಿತೈಃ** - ಬೀಸಲ್ಪಡುವ **ಭಾಸುರೈಃ** - ಹೊಳೆಯುವ **ಚಾಮರೈಃ** ಚಾಮರಗಳಿಂದ **ಭಾಸಂತೇ**-ಶೋಭಿಸುತ್ತಾರೆ

ಶ್ರೀಹರಿ ರಾಮಕೃಷ್ಣವೇದವ್ಯಾಸರೆಂಬ ನಿನ್ನ ಮೂರು ಅವತಾರಗಳಲ್ಲಿ ಮೂರನೆಯದಾದ ವ್ಯಾಸಾವತಾರವು ವಿಶೇಷವಾಗಿ ಜ್ಞಾನಕಾರ್ಯ ಮಾಡಿದೆ ವಾಯುದೇವ. ಹನುಮಭೀಮಮಧ್ವರೆಂಬ ನಿನ್ನ ಮೂರು ಅವತಾರಗಳಲ್ಲಿ ಮೂರನಯದಾದ ಮಧ್ವಾವತಾರ ವಿಶೇಷವಾಗಿ ಜ್ಞಾನಕಾರ್ಯ ಮಾಡಿದೆ ದೇವಾದಿ ಸಜ್ಜನ ಸೇವಿತವಾದ ಈ ನಿಮ್ಮ ಮೂರನ ಅವತಾರಗಳನ್ನು ಯಾರು ಸೇವಿಸುವರೊ ಅವರು ಬೇಗನೆ ಮೋಕ್ಷಹೊಂದುತ್ತಾರೆ ಮತ್ತು ವೈಕುಂಠಾದಿ ಲೋಕಗಳಲ್ಲಿ ಸುಂದರ ವೇಷ ಧರಿಸಿ ಮೆರೆಯುತ್ತಾರೆ ಸ್ಥಿರವೂ ನಿರ್ಮಲವೂ ಆದ ಕಾಂತಿಯಿಂದ ಹೊಳೆಯುತ್ತ ತಾರುಣ್ಯ ವಿಲಾಸ ಲಾವಣ್ಯಗಳಿಂದ ಚೆನ್ನಾಗಿ ತುಂಬಿಕೊಂಡು ಪ್ರಿಯತಮನ ಕತ್ತನ್ನು ತೋಳುಗಳಿಂದ ಬಳಸಿ ಸ್ತನಭಾರದ

ಸುಲಭ ಆಲಿಂಗನ ಸೌಖ್ಯ ನೀಡುವಂಥ ಪ್ರೇಯಸಿಯರೊಡನೆ ಇವರು ವಿಹರಿಸುತ್ತಾರೆ ಸೇವಕರು ಬೀಸುವ ಚಾಮರಗಳಿಂದ ಶೋಭಿಸುತ್ತಾರೆ.

-೧೦-

**ಆನಂದಾನ್ ಮಂದಮಂದಾ**
**ದದತಿ ಹಿ ಮರುತಃ ಕುಂದಮಂದಾರನಂದ್ಯಾ-**
**ವರ್ತಾಮೋದಾನ್ ದಧಾನಾ**
**ಮೃದುಪದಮುದಿತೋದ್ಗೀತಕೈಃ ಸುಂದರೀಣಾಂ ।**
**ವೃಂದೈರಾವಂದ್ಯಮುಕ್ತೇಂ-**
**ದ್ವಹಿಮಗುಮದನಾಹೀಂದ್ರದೇವೇಂದ್ರಸೇವ್ಯೇ**
**ಮೌಕುಂದೇ ಮಂದಿರೇಽಸ್ಮಿನ್**
**ಅವಿರತಮುದಯನ್ಮೋದಿನಾಂ ದೇವದೇವ ॥**

**ಹರಿವಾಯುಗಳೆ, ನಿಮ್ಮ ಭಕ್ತರಿಗೆ ಸುಖಕರ ವಾಯುವಿಹಾರ !**

**ದೇವದೇವ** - ದೇವತೆಗಳಿಗೆ ದೇವರೆನಿಸಿದ ಹರಿವಾಯುಗಳೇ, **ಮೃದುಪದಂ** - ಕೋಮಲ ಪದಾವಳಿಯಿಂದ ಕೂಡಿರುವಂತೆ **ಉದಿತೋದ್ಗೀತಕೈಃ** - ಒಳ್ಳೆಯ ಹಾಡುಗಳನ್ನು ಹಾಡುವ **ಸುಂದರೀಣಾಂ** - ಸುಂದರಿಯರ **ವೃಂದೈಃ** - ಸಮೂಹಗಳಿಂದ **ಆವಂದ್ಯ**-ಚನ್ನಾಗಿ ಹೊಗಳಲ್ಪಡುವ **ಮುಕ್ತ**-ಮುಕ್ತರಾದ **ಇಂದು**-ಚಂದ್ರನೂ **ಅಹಿಮಗು** - ಸೂರ್ಯನೂ **ಮದನ** - ಮನ್ಮಥನೂ **ಅಹೀಂದ್ರ**- ಸರ್ಪರಾಜಶೇಷನೂ **ದೇವೇಂದ್ರ**-ದೇವೇಂದ್ರನೂ ಇವರಿಂದ **ಸೇವ್ಯೇ**-ಸೇವಿಸಲ್ಪಡುವ **ಅಸ್ಮಿನ್ ಮೌಕುಂದೇ ಮಂದಿರೇ**-ಈ ವಿಷ್ಣು ಲೋಕದಲ್ಲಿ **ಮಂದಮಂದಾಃ**-ಬಹಳ ಮೆಲ್ಲಗೆ ಬೀಸುವ **ಕುಂದ**-ಕೋಲು ಮಲ್ಲಿಗೆಯೂ **ಮಂದಾರ**-ಪಾರಿಜಾತವೂ **ನಂದ್ಯಾವರ್ತ**- ನಂದಿಬಟ್ಟಲೂ ಇವುಗಳ **ಆಮೋದಾನ್**-ಸುಗಂಧಗಳನ್ನು

**ದಧಾನಾಃ** - ಹೊತ್ತಿರುವ **ಮರುತಃ** - ಗಾಳಿಗಳು **ಉದಯನ್ಮೋದಿನಾಂ** - ಸದಾ ಅಭಿವ್ಯಕ್ತ ಸ್ವರೂಪಾನಂದ ಉಳ್ಳ ಮುಕ್ತರಿಗೆ **ಆನಂದಾನ್**-ಸೌಖ್ಯಗಳನ್ನು **ಅವಿರತಂ** - ನಿರಂತರವಾಗಿ **ದದತಿ** - ಕೊಡುತ್ತವೆ **ಹಿ**-ಇದು ಶಾಸ್ತ್ರಗಳಲ್ಲಿ ಪ್ರಸಿದ್ಧ

ದೇವತೆಗಳಿಗೂ ದೇವನೆನಿಸಿದ ಹರಿಯೆ ಮತ್ತು ವಾಯುವೆ, ಆ ವಿಷ್ಣುಲೋಕದಲ್ಲಿ ಮುಕ್ತರಾದ ಚಂದ್ರ ಸೂರ್ಯ ಮನ್ಮಥ ಶೇಷ ಇಂದ್ರ ಮುಂತಾದವರು ಮೃದು ಮಧುರ ಪದಾವಳಿಗಳಿಂದ ಉತ್ತಮವಾಗಿ ಹಾಡುವ ಸುಂದರಿಯರಿಂದ ಹೊಗಳಿಸಿಕೊಳ್ಳುತ್ತ ಸುಖವಾಗಿ ವಿಹಾರ ಮಾಡುತ್ತಿದ್ದಾರೆ ಸದಾ ಅಭಿವ್ಯಕ್ತ ಸ್ವರೂಪಾನಂದವನ್ನು ಅನುಭವಿಸುತ್ತಿದ್ದಾರೆ ಅವರಿಗೆ ಕೋಲುಮಲ್ಲಿಗೆ ಪಾರಿಜಾತ ಸಂದಿಬಟ್ಟಲು ಮುಂತಾದ ಹೂಗಳ ಸುಗಂಧವನ್ನು ಹೊತ್ತು ಮೆಲ್ಲಮೆಲ್ಲನೆ ಬೀಸುವ ಗಾಳಿ ಸುಖ ನೀಡುತ್ತದೆ ಇದು ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿದೆ

-೧೧-

**ಉತ್ತಪ್ತಾತ್ಯುತ್ಕಟತ್ವಿಟ್**
**ಪ್ರಕಟಕಟಕಟಧ್ವಾನಸಂಘಟ್ಟನೋದ್ಯದ್**
**ವಿದ್ಯುದ್ವ್ಯೂಢಸ್ಫುಲಿಂಗ**
**ಪ್ರಕರವಿಕಿರಣೋತ್ಕ್ವಾಥಿತೇ ಬಾಧಿತಾಂಗಾನ್ ।**
**ಉದ್ಗಾಢಂ ಪಾತ್ಯಮಾನಾ**
**ತಮಸಿ ತತ ಇತಃ ಕಿಂಕರೈಃ ಪಂಕಿಲೇ ತೇ**
**ಪಂಕ್ತಿರ್ಗ್ರಾವ್ಣಾಂ ಗರಿಮ್ಣಾ**
**ಗ್ಲಪಯತಿ ಹಿ ಭವದ್ದ್ವೇಷಿಣೋ ವಿದ್ವದಾದ್ಯ ॥**

**ಹರಿವಾಯುಗಳೆ, ನಿಮ್ಮ ದ್ವೇಷಿಗಳಿಗೆ ನರಕದಲ್ಲಿ ನರಳಾಟ**

**ವಿದ್ವದಾದ್ಯ** - ಜ್ಞಾನಿಗಳಲ್ಲಿ ಮೊದಲಿಗನೆ, **ತೇ** - ನಿಮ್ಮ **ಕಿಂಕರೈಃ** - ಭಟರಿಂದ **ತತ ಇತಃ** - ಎಲ್ಲೆಡೆಯಿಂದ **ಉದ್ಗಾಢಂ** -ಬಲವಾಗಿ

**ಪಾತ್ಯಮಾನಾ-**ಬೀಳಿಸಲ್ಪಡುವ **ಉತ್ತಪ್ತ** - ಚೆನ್ನಾಗಿ ಕಾದ **ಅತ್ಯುತ್ಕಟತ್ವಿಟ್**-ಪ್ರಖರ ಪ್ರಕಾಶ ಉಳ್ಳ **ಗ್ರಾವ್ಣಾಂ** - ಕಲ್ಲುಗಳ **ಪಂಕ್ತಿಃ**-ಸುರಿಮಳೆಯು **ಪ್ರಕಟ** - ಚೆನ್ನಾಗಿ ಕೇಳಿ ಬರುವ **ಕಟಕಟಧ್ವಾನ** - ಕಟಕಟಧ್ವನಿಮಾಡುತ್ತ **ಸಂಘಟ್ಟನ** - ವೇಗವಾಗಿ ತಗಲುವುದಲಿಂದ **ಉದ್ಯತ್**-ಮೇಲೇಳುವ **ವಿದ್ಯುತ್**-ಮಿಂಚಿನಂಥ **ವ್ಯೂಢ** - ರಾಶಿಯಾಗಿರುವ **ಸ್ಫುಲಿಂಗ**-ಬೆಂಕಿ ಕಿಡಿಗಳ **ಪ್ರಕರ**-ಸಮೂಹದ **ವಿಕಿರಣ**-ಹರಡುವಿಕೆಯಿಂದ **ಉತ್ ಕ್ವಾಥಿತೇ-**ಚನ್ನಾಗಿ ಕುದಿಸಲ್ಪಟ್ಟ **ಪಂಕಿಲೇ**-ಕೆಸರಿಂದ ತುಂಬಿದ **ತಮಸಿ**-ಅಂಧಂತಮಸ್ಸಿನಲ್ಲಿ **ಬಾಧಿತಾಂಗಾನ್** - ಸರ್ವಾವಯವಗಳಲ್ಲಿ ಹಿಂಸಿಸಲ್ಪಟ್ಟ **ಭವದ್ ದ್ವೇಷಿಣಃ** - ನಿಮ್ಮ ದ್ವೇಷಿಗಳನ್ನು **ಗರಿಮ್ಣಾ** - ಭಾರದಿಂದ **ಗ್ಲಪಯತಿ** - ಪೀಡಿಸುತ್ತದೆ **ಹಿ** - ಇದು ಶಾಸ್ತ್ರಗಳಲ್ಲಿ ಪ್ರಸಿದ್ಧ

ಜ್ಞಾನಿಗಳಲ್ಲಿ ಮೊದಲಿಗನಾದ ಹರಿಯೆ, ವಾಯುವೆ, ಅಂಧಕಾರ ತುಂಬಿದ ತಮಸ್ಸಿನಲ್ಲಿ ನಿಮ್ಮ ಭಟರು ನಿಮ್ಮ ದ್ವೇಷಿಗಳ ಮೇಲೆ ಚನ್ನಾಗಿ ಕಾದು ಕಣ್ಣು ಕೋರೈಸುವ ಬೆಳಕಿಂದ ಹೊಳೆಯುವ ಭಾರದ ಕಲ್ಲುಗಳ ಸುರಿ ಮಳೆಯನ್ನು ಬಲವಾಗಿ ಎಲ್ಲೆಡೆಯಿಂದಲೂ ಮೈಮೇಲೆ ಬೀಳಿಸಿ ಗೋಳಾಡಿಸುತ್ತಾರೆ ಆಗ ಕಲ್ಲುಗಳು ಜೋರಾಗಿ ಕಟಕಟ ಧ್ವನಿಮಾಡುತ್ತ ವೇಗವಾಗಿ ಒಂದಕ್ಕೊಂದು ತಗುಲಿದಾಗ ಮಿಂಚಿನಂತೆ ಹೊಳೆವ ಬೆಂಕಿ ಕಿಡಿಗಳು ಮೇಲೆದ್ದು ಎಲ್ಲೆಡ ಹರಡುವುದರಿಂದ ತಮಸ್ಸಿನ ಕೆಸರು ಚೆನ್ನಾಗಿ ಕುದಿಯುತ್ತದೆ ಆಮ ಅದರಲ್ಲಿ ಬಿದ್ದಿರುವ ನಿನ್ನ ದ್ವೇಷಿಗಳನ್ನು ಸರ್ವಾವಯವಗಳಲ್ಲಿಯೂ ಹಿಂಸಿಸುತ್ತದೆ ಇದು ಶಾಸ್ತ್ರವಲ್ಲಿ ಪ್ರಸಿದ್ಧವಾಗಿದೆ-

ಯಸ್ತ್ವ ವ್ರಜಂತ್ಯಘಭಿದೋಽರಚನಾನುವಾದಾಃ
ಶೃಣ್ವಂತಿ ಯೇಽನ್ಯವಿಷಯಾಃ ಕುಕಥಾ ಮತಿಘ್ನೀಃ ।

ಯಾಸ್ತು ಶ್ರುತಾ ಹತಭಗೈರ್ನೃಭಿರಾತ್ತವೀರ್ಯಾ-
ನ್ಸಾನ್ಸಾನ್ ಕ್ಷಿಪಂತ್ಯಶರಣೇಷು ತಮಸ್ಸು ಹಂತ ॥
(ಭಾಗ ೩ ೧೬ ೨೩)

‘ಪಾಪಹಾರಿಯಾದ ಹರಿಯ ಲೀಲೆಯನ್ನು ವರ್ಣಿಸದವರು ಬುದ್ಧಿಯನ್ನು ಹಾಳುಮಾಡುವ ಅನ್ಯವಿಷಯಗಳ ಕೆಟ್ಟ ಮಾತುಗಳನ್ನು ಕೇಳುವವರು ವಿಷ್ಣುಲೋಕವನ್ನು ಹೊಂದುವುದಿಲ್ಲ ಭಾಗ್ಯಹೀನರಾದ ಆ ಜನರನ್ನು ಅವರು ಕೇಳಿದ ಕೆಟ್ಟ ಮಾತುಗಳೆ ಬಲಶಾಲಿಗಳಾಗಿ ನೆಳೆದು ರಕ್ಷಕರೆ ಇಲ್ಲದಂಥ ತಮಸ್ಸುಗಳಲ್ಲಿ ಬೀಳಿಸುತ್ತವೆ’ ಎಂದು ಭಾಗವತದಲ್ಲಿ ಹೇಳಿದೆ

-೧೨-

**ಅಸ್ಮಿನ್ನಸ್ಮದ್ಗುರೂಣಾಂ**
**ಹರಿಚರಣಚಿರಧ್ಯಾನಸನ್ಮಂಗಲಾನಾಂ**
**ಯುಷ್ಮಾಕಂ ಪಾರ್ಶ್ವಭೂಮಿಂ**
**ಧೃತರಣರಣಿಕಸ್ವರ್ಗಿಸೇವ್ಯಾಂ ಪ್ರಪನ್ನಃ ।**
**ಯಸ್ತೂದಾಸ್ತೇ ಸ ಆಸ್ತೇಽ-**
**ಧಿಭವಮಸುಲಭಕ್ಲೇಶನಿರ್ಮೋಕಮಸ್ತ -**
**ಪ್ರಾಯಾನಂದಂ ಕಥಂಚಿ-**
**ನ್ನವಸತಿ ಸತತಂ ಪಂಚಕಷ್ಟೇಽತಿಕಷ್ಟೇ ॥**

**ಹರಿ, ನಿನ್ನಲ್ಲಿ ಯಾರಿಗೂ ಅಸಡ್ಡೆ ಸಲ್ಲದು.**

**ಅಸ್ಮಿನ್**-ಈ ಲೋಕದಲ್ಲಿ **ಹರಿಚರಣ**-ಪಾಪಹಾರಿಯಾದ ನಿನ್ನ ಚರಣಗಳ **ಚಿರಧ್ಯಾನ**-ಸದಾ ಧ್ಯಾನ ಮಾಡುವವರಿಗೆ **ಸನ್ಮಂಗಲಾನಾಂ**-ಒಳ್ಳೆಯ ಮಂಗಲ ಉಂಟುಮಾಡುವ **ಅಸ್ಮದ್**-ನಮಗೆ **ಗುರೂಣಾಂ**-ಮೂಲ ಗುರುಗಳೆನಿಸಿದ **ಯುಷ್ಮಾಕಂ**-ನಿಮ್ಮ **ಧೃತರಣರಣಿಕ**-ಅತ್ಯಂತ ಉತ್ಸುಕತೆ ತಾಳಿದ **ಸ್ವರ್ಗಿ**-ದೇವತೆಗಳಿಂದ **ಸೇವ್ಯಾಂ**-ಸೇವಿಸಲು ಯೋಗ್ಯವಾದ **ಪಾರ್ಶ್ವಭೂಮಿಂ**-ಸಮೀಪ ಪ್ರದೇಶವನ್ನು **ಪ್ರಪನ್ನಸ್ತು**-ಹೊಂದಿದ್ದರೂ ಕೂಡ **ಯಃ**-ಯಾರು **ಉದಾಸ್ತೇ**-ಅಸಡ್ಡೆ ಮಾಡುವನೋ **ಸಃ**-ಅವನು **ಅಸುಲಭ ಕ್ಲೇಶನಿರ್ಮೋಕಂ**-ದುಃಖಪರಿಹಾರ ದುರ್ಲಭವಾಗಿರುವಂತೆ ಮತ್ತು **ಅಸ್ತಪ್ರಾಯಾನಂದಂ**-ಆನಂದವಿದ್ದೂ ಇಲ್ಲದಂತ **ಅಧಿಭವಂ**-ಸಂಸಾರದಲ್ಲಿ

**ಸತತಂ**-ಸದಾ **ಆಸ್ತೇ**-ಇರುತ್ತಾನೆ **ಅತಿಕಷ್ಟೇ**-ಅತ್ಯಂತ ಕಷ್ಟಕರವಾದ **ಪಂಚಕಷ್ಟೇ**-ಪಂಚೇಂದ್ರಿಯಗಳಿಗೂ ಕಷ್ಟನೀಡುವ ಮತ್ತು ರೌರವ ಮಹಾರೌರವ ವಹ್ನಿ ವೈತರಣೀ ಕುಂಭೀಪಾಕವೆಂಬ ಪಂಚ ನರಕಗಳಿಗಿಂತಲೂ ಹೆಚ್ಚು ಕಷ್ಟ ಕರವಾದ ತಮಸ್ಸಿನಲ್ಲಿ **ಕಥಂಚಿತ್**-ಯಾವ ರೀತಿಯಿಂದಲೂ **ನ ವಸತಿ**-ವಾಸಮಾಡುವುದಿಲ್ಲ

ಶ್ರೀಹರಿ, ನೀನು ಈ ಲೋಕದಲ್ಲಿ ಪಾಪಪರಿಹಾರಕವಾದ ನಿನ್ನ ಚರಣಗಳ ಸದಾ ಧ್ಯಾನ ಮಾಡುವವರಿಗೆ ಅಖಿಲ ಸನ್ಮಂಗಲ ನೀಡುವವನು ನಿನ್ನ ಬಳಿಯಲ್ಲಿದ್ದು ನಿನ್ನ ಉಪದೇಶ ಪಡೆಯಬೇಕೆಂದೂ ನಿನ್ನನ್ನೆ ಧ್ಯಾನಿಸಬೇಕೆಂದೂ ದೇವತೆಗಳೂ ಅತ್ಯಂತ ಉತ್ಸುಕರಾಗಿರುತ್ತಾರ ಅಂಥ ನಿನ್ನ ಬಳಿಯಲ್ಲೆ ಇರುವ ಅವಕಾಶ ಪಡೆದೂ ಅದನ್ನು ಉಪೇಕ್ಷಿಸುವವನು ಅದೃಷ್ಟಹೀನ ಪ್ರತಿಯೊಬ್ಬ ಮಾನವನಿಗೂ ನಿನ್ನ ಶಾಸ್ತ್ರಗಳು, ಶಾಸ್ತ್ರೋಪದೇಶಕರಾದ ಗುರುಗಳು ಅನಾಯಾಸವಾಗಿ ದೊರಕುತ್ತಾರೆ ಹೃದಯದಲ್ಲಿ ಜೀವನ ಬಳಿಯಲ್ಲಿಯೆ ನೀನು ವಾಸಮಾಡುವಿ, ಹೀಗಿದ್ದೂ ಶಾಸ್ತ್ರಗಳನ್ನು ಗುರುಮುಖದಿಂದ ತಿಳಿಯದೆ, ಹೃದಯದಲ್ಲಿ ನಿನ್ನ ಧ್ಯಾನ ಮಾಡದೆ ಉಪೇಕ್ಷೆ ಮಾಡುವ ಮಾನವನು ಸದಾ ಸಂಸಾರದಲ್ಲಿಯೆ ಇರಬೇಕಾಗುತ್ತದೆ ಸಂಸಾರದಲ್ಲಿ ದುಃಖ ಹೆಚ್ಚು ಅದರ ಪರಿಹಾರ ಕಷ್ಟ ಸುಖ ಅತ್ಯಲ್ಪ ಅದು ಇದ್ದೂ ಇಲ್ಲದಂತೆ ಆದರೂ ನಿನ್ನಲ್ಲಿ ದ್ವೇಷ ಮಾಡದೆ ಕೇವಲ ಉಪೇಕ್ಷೆ ಮಾಡುವವನಿಗೆ ಪಂಚೇಂದ್ರಿಯಗಳಿಗೂ ಕಷ್ಟ ನೀಡುವ, ರೌರವಾದಿ ಪಂಚ ನರಕಗಳನ್ನೂ ಮೀರುವ ತಮಸ್ಸಿನಲ್ಲಿ ವಾಸಮಾಡುವ ಪ್ರಸಂಗವಿಲ್ಲ

**ವಾಯುದೇವ, ನಿನ್ನಲ್ಲಿ ಯಾರಿಗೂ ಅಸಡ್ಡೆ ಸಲ್ಲದು.**

**ಅಸ್ಮಿನ್** - ಈ ಲೋಕದಲ್ಲಿ **ಹರಿಚರಣ** - ಶ್ರೀಹರಿಯ ಚರಣಗಳ **ಚಿರಧ್ಯಾನ** - ಸದಾಧ್ಯಾನದಿಂದ **ಸನ್ಮಂಗಲಾನಾಂ** - ಉತ್ತಮ ಮಂಗಳಕರರಾದ **ಅಸ್ಮದ್** - ನಮಗೆ **ಗುರೂಣಾಂ** - ಆದಿಗುರುಗಳಾದ **ಯುಷ್ಮಾಕಂ** - ನಿಮ್ಮ **ಧೃತರಣರಣಿಕ** - ಅತ್ಯಂತ ಉತ್ಸುಕತೆ ತಾಳಿದ **ಸ್ವರ್ಗಿ** - ದೇವತೆಗಳಿಂದ **ಸೇವ್ಯಾಂ**-ಸೇವಿಸಲು ಯೋಗ್ಯವಾದ **ಪಾರ್ಶ್ವಭೂಮಿಂ** - ಸಮೀಪದ ಪ್ರದೇಶವನ್ನು **ಪ್ರಪನ್ನಸ್ತು** - ಹೊಂದಿದ್ದರೂ ಕೂಡ **ಯಃ** -

ಯಾರು **ಉದಾಸ್ತೇ** - ಅನಷ್ಟೆ ಮಾಡುವನೋ **ಸಃ** - ಅವನು **ಅಸುಲಭ ಕ್ಲೇಶ ನಿರ್ಮೋಕಂ**-ದು ಖಪರಿಹಾರ ಕಷ್ಟವಾಗುವಂತ **ಅಸ್ತಪ್ರಾಯಾನಂದಂ** - ಸುಖವಿಷ್ಟೂ ಇಲ್ಲದಂತೆ **ಅಧಿಭವಂ** - ಸಂಸಾರವಲ್ಲಿಯೆ **ಸತತಂ** - ಯಾವಾಗಲೂ **ಆಸ್ತೇ** - ಇರುತ್ತಾನೆ **ಅತಿಕಷ್ಟೇ** - ಅತ್ಯಂತ ಕಷ್ಟಕರವಾದ **ಪಂಚಕಷ್ಟೇ** ತಮಸ್ಸಿನಲ್ಲಿ **ಕಥಂಚಿತ್** - ಯಾವ ರೀತಿಯಿಂದಲೂ **ನ ವಸತಿ** - ವಾಸ ಮಾಡುವುದಿಲ್ಲ

ವಾಯುದೇವ, ಸದಾ ಹರಿಪಾದ ಧ್ಯಾನದಿಂದ ಅತ್ಯಂತ ಮಂಗಳಕರರು ನೀವು ನಮಗೆ ಆದಿಗುರು ದೇವತೆಗಳೂ ಜಯತೀರ್ಥ ವ್ಯಾಸತೀರ್ಥ ಮುಂತಾದ ಅವತಾರ ಮಾಡಿ ನಿಮ್ಮ ಶಾಸ್ತ್ರಶ್ರವಣ ಮಾಡಿ ನಿಮ್ಮನ್ನು ಧ್ಯಾನಿಸಲು ಅತ್ಯಂತ ಉತ್ಸುಕರಾಗಿದ್ದಾರೆ ನಿಮ್ಮ ಶಾಸ್ತ್ರಗಳೂ ಶಾಸ್ತ್ರೋಪದೇಶಕರಾದ ಗುರುಗಳೂ ಅನಾಯಾಸವಾಗಿ ದೊರಕುತ್ತಿರುವಾಗ, ಹೃದಯದಲ್ಲಿ ಜೀವನ ಒಳಿಯಲ್ಲೇ ನೀವಿರುತ್ತಿರುವಾಗ ಶಾಸ್ತ್ರಾಭ್ಯಾಸ ಮಾಡದೆ ಧ್ಯಾನವನ್ನೂ ಮಾಡದೆ ನಿಮ್ಮಲ್ಲಿ ಉಪೇಕ್ಷೆ ಮಾಡುವವನು ನಿತ್ಯ ಸಂಸಾರಿಯಾಗಿ ಹೆಚ್ಚು ದುಃಖ ಮತ್ತು ಅಲ್ಪಸುಖ ಹೊಂದುತ್ತಾನೆ ಅವನಿಗೆ ದುಃಖ ಪರಿಹಾರ ಕಷ್ಟ ಸಿಗುವ ಸುಖ ಅಲ್ಪ, ಇಷ್ಟೂ ಇಲ್ಲವಂತೆ ಆದರೂ ನಿಮ್ಮ ದ್ವೇಷಿಗಳಿಗೆ ಸಿಗುವ ತಮಸ್ಸು ನಿಮ್ಮಲ್ಲಿ ಉಪೇಕ್ಷೆ ಮಾಡುವವನಿಗೆ ಸರ್ವಥಾ ಸಿಗುವುದಿಲ್ಲ

-೧೩-

**ಕ್ಷುತ್ ಕ್ಷಾಮಾನ್ ರೂಕ್ಷರಕ್ಷೋ-**
**ರದಖರನಖರಕ್ಷುಣ್ಣವಿಕ್ಷೋಭಿತಾಕ್ಷಾನ್**
**ಆಮಗ್ನಾನಂಧಕೂಪೇ**
**ಕ್ಷುರಮುಖಮುಖರೈಃ ಪಕ್ಷಿಭಿರ್ವಿಕ್ಷತಾಂಗಾನ್ ।**
**ಪೂಯಾಸೃಙ್ಮೂತ್ರವಿಷ್ಠಾ-**
**ಕ್ರಿಮಿಕುಲಕಲಿಲೇ ತತ್ ಕ್ಷಣಕ್ಷಿಪ್ತಶಕ್ತ್ಯಾ -**
**ದ್ಯಸ್ತ್ರವ್ರಾತಾರ್ದಿತಾಂಸ್ತ್ವದ್ -**
**ದ್ವಿಷ ಉಪಜಿಹತೇ ವಜ್ರಕಲ್ಪಾ ಜಲೂಕಾಃ ॥**

## ಹರಿವಾಯುಗಳೆ, ನಿಮ್ಮ ದ್ವೇಷಿಗಳಿಗೆ ಸಿಗುವ 'ಪಂಚಕಷ್ಟ' ಇದು !

**ಕ್ಷುತ್**-ಹಸಿವಿನಿಂದ **ಕ್ಷಾಮಾನ್**-ಕ್ಷೀಣರಾದ **ರೂಕ್ಷ**-ಕ್ರೂರರಾದ **ರಕ್ಷಃ**- ರಾಕ್ಷಸರ **ರದ**-ಹಲ್ಲುಗಳಿಂದಲೂ **ಖರ**-ತೀಕ್ಷ್ಣವಾದ **ನಖರ**-ಉಗುರುಗಳಿಂದಲೂ **ಕ್ಷುಣ್ಣ**-ಪುಡಿ ಮಾಡಲ್ಪಟ **ವಿಕ್ಷೋಭಿತ**-ಉದ್ವಿಗ್ನ ಗೊಳಿಸಲ್ಪಟ್ಟ **ಅಕ್ಷಾನ್**-ಕಣ್ಣುಗಳುಳ್ಳ **ಪೂಯ**-ಕೀವು **ಅಸೃಗ್**-ರಕ್ತ **ಮೂತ್ರ**-ಮೂತ್ರ **ವಿಷ್ಠಾ**-ಮಲ ಮತ್ತು **ಕೃಮಿಕುಲ**-ಕ್ರಿಮಿಗಳ ಸಮೂಹ ಇವುಗಳಿಂದ **ಕಲಿಲೇ**-ತುಂಬಿದ **ಅಂಧಕೂಪೇ**-ಕಾರ್ಗತ್ತಲಿನ ಬಾವಿಯಲ್ಲಿ **ಆಮಗ್ನಾನ್** - ಪೂರ್ತಿ ಮುಳುಗಿರುವ **ಕ್ಷುರ** - ಕ್ಷೌರದ ಕತ್ತಿಯಂತೆ ಹರಿತವಾದ **ಮುಖ**-ಕೊಕ್ಕುಗಳುಳ್ಳ ಮತ್ತು **ಮುಖರೈಃ**-ಕೆಟ್ಟ ಧ್ವನಿಯಿಂದ ಕೂಗುವ **ಪಕ್ಷಿಭಿಃ** - ಪಕ್ಷಿಗಳಿಂದ **ವಿಕ್ಷತ** - ಬಹಳ ಗಾಯಗೊಳಿಸಲ್ಪಟ್ಟ **ಅಂಗಾನ್**- ಅವಯವಗಳುಳ್ಳ **ತತ್ ಕ್ಷಣ** - ಆದೇಕ್ಷಣದಲ್ಲಿ **ಕ್ಷಿಪ್ತ**-ಎಸೆಯಲ್ಪಟ್ಟ **ಶಕ್ತ್ಯಾದಿ** - ಶಕ್ತ್ಯಾಯುಧ ಮುಂತಾದ **ಅಸ್ತ್ರ** - ಆಯುದಗಳ **ವ್ರಾತ** - ಸಮೂಹಗಳಿಂದ **ಅರ್ದಿತಾನ್** - ಪೀಡಿಸಲ್ಪಟ್ಟ **ತ್ವದ್ ದ್ವಿಷಃ** - ನಿಮ್ಮ ದ್ವೇಷಿಗಳನ್ನು **ವಜ್ರಕಲ್ಪಾಃ** - ವಜ್ರದಂತೆ ಕಠೋರವಾದ **ಜಲೂಕಾಃ** - ಜಿಗಣೆಗಳು **ಉಪಜಿಹತೇ** - ಸಮೀಪಿಸುತ್ತವೆ

ಹರಿವಾಯುಗಳೆ, ನಿಮ್ಮ ದ್ವೇಷಿಗಳು ತಮಸ್ಸಿನಲ್ಲಿ ಸದಾ ಹಸಿವಿನಿಂದ ಕಂಗೆಟ್ಟಿರುತ್ತಾರೆ ಕ್ಷೀಣರಾಗಿರುತ್ತಾರೆ ಕ್ರೂರ ರಾಕ್ಷಸರು ಹಲ್ಲುಗಳಿಂದಲೂ ತೀಕ್ಷ್ಣವಾದ ಉಗುರುಗಳಿಂದಲೂ ಅವರ ಕಣ್ಣುಗಳನ್ನು ಚೂರು ಚೂರು ಮಾಡಿ ಉದ್ವಿಗ್ನಗೊಳಿಸುತ್ತಾರೆ ಅವರು ಸದಾ ಮಲ ಮೂತ್ರ ರಕ್ತ ಕೀವು ಕ್ರಿಮಿಗಳಿಂದ ಕೂಡಿದ ಕಾರ್ಗತ್ತಲು ತುಂಬಿದ ಬಾವಿಯಲ್ಲಿ ಪೂರ್ತಿ ಮುಳುಗಿರುತ್ತಾರೆ ಕೆಟ್ಟ ಧ್ವನಿಯಿಂದ ಕೂಗುವ ಕಾಗೆ ಹದ್ದುಗಳಂಥ ಪಕ್ಷಿಗಳು ಕ್ಷೌರದ ಕತ್ತಿಯಂತೆ ಹರಿತವಾದ ಕೊಕ್ಕುಗಳಿಂದ ಮೈಯನ್ನು ಕುಕ್ಕಿ ಕುಕ್ಕಿ ಗಾಯಗೊಳಿಸುತ್ತವೆ ಈ ಎಲ್ಲ ನೋವನ್ನು ತಿನ್ನುವ ಸಮಯದಲ್ಲಿಯೆ ನಿಮ್ಮ ಭಟರು ಮೇಲಿನಿಂದ ಶಕ್ತ್ಯಾಯುಧ ಮುಂತಾದ ಎಲ್ಲ ಬಗೆಯ ಆಯುಧಗಳನ್ನು ಅವರ ಮೇಲೆಸೆದು ನೋಯಿಸುತ್ತಾರೆ ವಜ್ರದಂತೆ ಕಠೋರವಾದ ಜಿಗಣೆಗಳೂ ಸಮೀಪಿಸಿ ಮುತ್ತಿಕೊಳ್ಳುತ್ತವೆ

-೧೪-

**ಮಾತರ್ಮೇ ಮಾತರಿಶ್ವನ್**
**ಪಿತರತುಲಗುರೋ ಭ್ರಾತರಿಷ್ಟಾಪ್ತಬಂಧೋ**
**ಸ್ವಾಮಿನ್ ಸರ್ವಾಂತರಾತ್ಮನ್**
**ಅಜರ ಜರಯಿತರ್ಜನ್ಮಮೃತ್ಯಾಮಯಾನಾಂ ।**
**ಗೋವಿಂದೇ ದೇಹಿ ಭಕ್ತಿಂ**
**ಭವತಿ ಚ ಭಗವನ್ನೂರ್ಜಿತಾಂ ನಿರ್ನಿಮಿತ್ತಾಂ**
**ನಿರ್ವ್ಯಾಜಾಂ ನಿಶ್ಚಲಾಂ**
**ಸದ್ಗುಣಗಣಬೃಹತೀಂ ಶಾಶ್ವತೀಮಾಶು ದೇವ ॥**

**ಹರಿ, ಎನಗೆ ನಿನ್ನಲ್ಲಿ ಒಳ್ಳೆಯ ಭಕ್ತಿ ನೀಡು** ·

**ಮೇ**-ನನಗೆ **ಮಾತಃ**-ತಾಯಿಯಂತಿರುವ **ಪಿತಃ**-ತಂದೆಯಂತಿರುವ **ಅತುಲಗುರೋ**-ಅನನ್ಯಸದೃಶಗುರುವಾದ **ಭ್ರಾತಃ**-ಸೋದರನಂತಿರುವ **ಇಷ್ಟ**-ಪ್ರಿಯನಾದ **ಆಪ್ತಬಂಧೋ**-ಆಪ್ತಬಂಧುವಾದ **ಸ್ವಾಮಿನ್** - ಒಡೆಯನಾದ **ಸರ್ವಾಂತರಾತ್ಮನ್** - ಸರ್ವಾಂತರ್ಯಾಮಿಯಾದ **ಅಜರ** - ಮುಪ್ಪಿಲ್ಲದ **ಜನ್ಮ ಮೃತ್ಯಾಮಯಾನಾಂ** - ಜನನ ಮರಣ ಮತ್ತು ವ್ಯಾಧಿಗಳನ್ನು **ಜರಯಿತಃ** - ಪರಿಹರಿಸುವ **ಮಾತರಿಶ್ವನ್** - ಪ್ರಮಾಣಗಳಾದ ಋಗ್ವೇದಾದಿ ಶಾಸ್ತ್ರಗಳಲ್ಲಿ ಪ್ರತಿಪಾದ್ಯನಾಗಿ ವಾಯುದೇವನಲ್ಲಿರುವ **ಭಗವನ್** - ಷಡ್ಗುಣೈಶ್ವರ್ಯ ಪೂರ್ಣನಾದ **ದೇವ** - ದೇವನಾದ ಹರಿಯೆ, **ಮೇ** - ನನಗೆ **ಗೋವಿಂದೇ** - ವೇದವೇದ್ಯನಾದ **ಭವತಿ** - ನಿನ್ನಲ್ಲಿ **ಊರ್ಜಿತಾಂ** - ಪರಿಪುಷ್ಟವಾದ **ನಿರ್ನಿಮಿತ್ತಾಂ** - ಫಲಕಾಮನಾದಿ ನಿಮಿತ್ತವಿಲ್ಲದ **ನಿರ್ವ್ಯಾಜಾಂ** - ದಂಭವಿಲ್ಲದ **ನಿಶ್ಚಲಾಂ** - ಅಚಲವಾದ **ಸದ್ಗುಣಗಣ**-ಸದ್ಗುಣ ಸಮೂಹಗಳಿಂದ **ಬೃಹತೀಂ** - ಶ್ರೇಷ್ಠವಾದ **ಚ** - ಮತ್ತು **ಶಾಶ್ವತೀಂ**-ಶಾಶ್ವತವಾದ **ಭಕ್ತಿಂ**-ಭಕ್ತಿಯನ್ನು **ಆಶು**-ಬೇಗನೆ **ದೇಹಿ**-ಕೊಡು

ಹರಿ, ನೀನೆ ನನಗೆ ತಾಯಿ ತಂದೆ ಅನನ್ಯಸದೃಶನಾದ ಗುರು ಸೋದರ ಪ್ರಿಯ ಆಪ್ತಬಂಧು ಪ್ರಭು ಎಲ್ಲವೂ ಆಗಿರುವಿ ನೀನು ಸರ್ವಾಂತರ್ಯಾಮಿ

ಮುಪ್ಪಿಲ್ಲದವ ನಮ್ಮ ಜನ್ಮ ಮರಣ ವ್ಯಾಧಿಗಳನ್ನು ಪರಿಹರಿಸುವವ ಸಪ್ತ ಶಿವಾಸು ಮಾತೃಷು' ಎಂಬಂತೆ ಋಗಾದಿ ನಾಲ್ಕು ವೇದಗಳು ಮಹಾಭಾರತ ಪಂಚರಾತ್ರ ಮೂಲರಾಮಾಯಣಗಳೆಂಬ ಏಳು ಪ್ರಮಾಣ ಗ್ರಂಥಗಳಲ್ಲಿಯೂ ಪ್ರತಿಪಾದ್ಯನಾಗಿ ವಾಯುದೇವನಲ್ಲಿರುವವ ಷಡ್ಗುಣೈಶ್ವರ್ಯ ಪೂರ್ಣನಾದ ದೇವ ವೇದವೇದ್ಯನಾದ ನಿನ್ನಲ್ಲಿ ನನಗೆ ಪರಿಪುಷ್ಟವೂ ಫಲಕಾಮನಾದಿ ನಿಮಿತ್ತರಹಿತವೂ ದಂಭರಹಿತವೂ ನಿಶ್ಚಲವೂ ಶಮದಮಾದಿ ಗುಣಗಳಿಂದ ಯುಕ್ತವಾಗಿ ಶ್ರೇಷ್ಠವೂ ಆದ ಮತ್ತು ಶಾಶ್ವತವಾದ ಭಕ್ತಿಯನ್ನು ನೀಡು

**ವಾಯುದೇವ, ಎನಗೆ ನಿನ್ನಲ್ಲಿ ಒಳ್ಳೆಯ ಭಕ್ತಿ ನೀಡು .**

**ಮೇ** - ನನಗೆ **ಮಾತಃ** - ತಾಯಿಯಂತಿರುವ **ಪಿತಃ** - ತಂದೆಯಂತಿರುವ **ಅತುಲ ಗುರೋ** - ಅಸದೃಶಗುರುವಾದ **ಭ್ರಾತಃ**-ಸೋದರನಂತಿರುವ **ಇಷ್ಟ** - ಪ್ರಿಯನಾದ **ಆಪ್ತಬಂಧೋ** - ಆಪ್ತಬಂಧುವಾದ **ಸ್ವಾಮಿನ್** - ಒಡೆಯನಾದ **ಸರ್ವಾಂತರಾತ್ಮನ್** - ಸರ್ವಾಂತರ್ಯಾಮಿಯಾದ **ಅಜರ** - ಮುಪ್ಪಿಲ್ಲದ **ಜನ್ಮ ಮೃತ್ಯಾಮಯಾನಾಂ** - ಜನನ ಮರಣ ಮತ್ತು ವ್ಯಾಧಿಗಳನ್ನು **ಜರಯಿತಃ** - ಪರಿಹರಿಸುವ **ಮಾತರಿಶ್ವನ್** - ಪ್ರಮಾಣಗಳಾದ ಋಗ್ವೇದಾದಿ ಶಾಸ್ತ್ರಗಳಲ್ಲಿ ಅಭಿಮಾನಿಯಾಗಿರುವ **ಭಗವನ್** - ಷಡ್ಗುಣೈಶ್ವರ್ಯ ಸಂಪನ್ನನಾದ **ದೇವ** - ವಾಯುದೇವನೆ, **ಮೇ** - ನನಗೆ **ಗೋವಿಂದೇ** - ಹರಿಯಲ್ಲಿಯೂ **ಭವತಿ ಚ** - ನಿನ್ನಲ್ಲಿಯೂ **ಊರ್ಜಿತಾಂ** - ಪರಿಪುಷ್ಟವಾದ **ನಿರ್ನಿಮಿತ್ತಾಂ** - ಫಲ ಕಾಮನಾ ನಿಮಿತ್ತವಿಲ್ಲದ **ನಿರ್ವ್ಯಾಜಾಂ** - ದಂಭರಹಿತವಾದ **ನಿಶ್ಚಲಾಂ** - ಅಚಲವಾದ **ಸದ್ಗುಣಗಣ** - ಸದ್ಗುಣ ಸಮೂಹಗಳಿಂದ **ಬೃಹತೀಂ** - ಶ್ರೇಷ್ಠವಾದ **ಶಾಶ್ವತೀಂ** - ಶಾಶ್ವತವಾದ **ಭಕ್ತಿಂ** - ಭಕ್ತಿಯನ್ನು **ಆಶು** - ಬೇಗನೆ **ದೇಹಿ** - ಕೊಡು

ವಾಯುದೇವ, ನೀನೆ ನನಗೆ ತಾಯಿ ತಂದೆ ಅಸದೃಶಗುರು ಸೋದರ ಪ್ರಿಯ ಆಪ್ತಬಂಧು ಪ್ರಭು ಎಲ್ಲವೂ ಆಗಿರುವಿ ನೀನು ಸರ್ವಾಂತರ್ಯಾಮಿ ಮುಪ್ಪಿಲ್ಲದವ ನಮ್ಮ ಮರಣ ವ್ಯಾಧಿಗಳನ್ನು ಪರಿಹರಿಸುವವ 'ಸಪ್ತ ಶಿವಾಸು ಮಾತೃಷು' ಎಂಬಂತೆ ಋಗಾದಿ ನಾಲ್ಕು ವೇದಗಳು ಮಹಾಭಾರತ ಪಂಚರಾತ್ರ

ಮೂಲರಾಮಾಯಣಗಳೆಂಬ ಏಳು ಪ್ರಮಾಣ ಗ್ರಂಥಗಳಲ್ಲಿ ಅಭಿಮಾನಿಯಾಗಿ ಪ್ರತಿಪಾದ್ಯನಾಗಿ ವಿಮರ್ಶಕನೂ ಆಗಿರುವವನು ಷಡ್ಗುಣೈಶ್ವರ್ಯ ಸಂಪನ್ನನಾದ ದೇವನೆ ನೀನು ನನಗೆ ಶ್ರೀಹರಿಯಲ್ಲಿಯೂ ನಿನ್ನಲ್ಲಿಯೂ ಪರಿಪುಷ್ಟವಾದ ಫಲಕಾಮನಾ ರಹಿತವಾದ ದಂಭರಹಿತವಾದ ನಿಶ್ಚಲವಾದ ಶಮದಮಾದಿ ಸದ್ಗುಣಗಳಿಂದಾಗಿ ಶ್ರೇಷ್ಠವೆನಿಸಿದ ಶಾಶ್ವತವಾದ ಭಕ್ತಿ ನೀಡು

- ೧೫ -

**ವಿಷ್ಣೋರತ್ಯುತ್ತಮತ್ವಾದ್**
**ಅಖಿಲಗುಣಗಣೈಸ್ತತ್ರ ಭಕ್ತಿಂ ಗರಿಷ್ಠಾಂ**
**ಆಶ್ಲಿಷ್ಟೇ ಶ್ರೀಧರಾಭ್ಯಾಂ**
**ಅಮುಮಥ ಪರಿವಾರಾತ್ಮನಾ ಸೇವಕೇಷು ।**
**ಯಃ ಸಂಧತ್ತೇ ವಿರಿಂಚ -**
**ಶ್ವಸನವಿಹಗಪಾನಂತರುದ್ರೇಂದ್ರಪೂರ್ವೇ -**
**ಷ್ವಾಧ್ಯಾಯಂಸ್ತಾರತಮ್ಯಂ**
**ಸ್ಫುಟಮವತಿ ಸದಾ ವಾಯುರಸ್ಮದ್ಗುರುಸ್ತಂ ॥**

**ಹರಿ, ನೀನು ವಾಯುದೇವನನ್ನು ಚೆನ್ನಾಗಿ ರಕ್ಷಿಸುವಿ**

**ಅಖಿಲಗುಣಗಣೈಃ** - ಎಲ್ಲ ಗುಣಸಮೂಹಗಳಿದಲೂ **ವಿಷ್ಣೋಃ** - ಸರ್ವವ್ಯಾಪ್ತನಾದ ನಿನಗೆ **ಅತ್ಯುತ್ತಮತ್ವಾದ್**-ಸರ್ವೋತ್ತಮತ್ವವಿರುವುದರಿಂದ **ತತ್ರ** - ಆ ನಿನ್ನಲ್ಲಿಯೂ **ಅಥ**-ನಂತರ **ಅಮುಂ ಪ್ರತಿ** - ಆ ನಿನಗೆ **ಪರಿವಾರಾತ್ಮನಾ** - ಪರಿವಾರರೂಪದಿಂದ **ಸೇವಕೇಷು**-ಸೇವಕರಾದ **ವಿರಿಂಚ** - ಬ್ರಹ್ಮನೂ **ಶ್ವಸನ**-ವಾಯುವೂ **ವಿಹಗಪ**-ಗರುಡನೂ **ಅನಂತ** - ಶೇಷನೂ **ರುದ್ರ**-ರುದ್ರನೂ **ಇಂದ್ರ**-ಇಂದ್ರನೂ **ಪೂರ್ವಕೇಷು** - ಇವರೇ ಮೊದಲಾದವರಲ್ಲಿಯೂ **ತಾರತಮ್ಯಂ** - ತಾರತಮ್ಯವನ್ನು **ಆಧ್ಯಾಯನ್** - ಚೆನ್ನಾಗಿ ಅನುಸಂಧಾನಮಾಡುತ್ತ **ಶ್ರೀಧರಾಭ್ಯಾಂ**-ಶ್ರೀಭೂದೇವಿಯರಿಂದ **ಆಶ್ಲಿಷ್ಟೇ** - ಆಲಿಂಗಿತನಾದ **ತತ್ರ** - ಆ ನಿನ್ನಲ್ಲಿ **ಗರಿಷ್ಠಾಂ** - ಅತ್ಯಂತ ಗಾಢವಾದ **ಭಕ್ತಿಂ** - ಭಕ್ತಿಯನ್ನು **ಅಸ್ಮದ್ ಗುರುಃ** - ನಮ್ಮ ಗುರುವಾದ

**ವಾಯುಃ**-ವಾಯುವು **ಸಂಧತ್ತೇ**-ಇಡುತ್ತಾನೆ ಆದ್ದರಿಂದ **ತಂ**-ಆ ವಾಯುವನ್ನು **ಯಃ**-ಲಕ್ಷ್ಮೀ ಸಹಿತ ನಾರಾಯಣನಾದ **ಭವಾನ್**-ನೀನು **ಸದಾ**-ಯಾವಾಗಲೂ **ಸ್ಫುಟಂ**- ಬಲು ಚೆನ್ನಾಗಿ **ಅವತಿ**-ರಕ್ಷಿಸುತ್ತಿರುವಿ

ಹರಿ, ಸರ್ವವ್ಯಾಪ್ತನಾದ ನೀನೆ ಜ್ಞಾನಾನಂದಾದಿ ಸಕಲ ಗುಣಗಳಿಂದಲೂ ಸರ್ವೋತ್ತಮ ಆದ್ದರಿಂದ ನಿನ್ನಲ್ಲಿಯೂ ಅನಂತರ ನಿನ್ನ ಸೇವಕರಾದ ಬ್ರಹ್ಮ ವಾಯು ಗರುಡ ಶೇಷ ರುದ್ರ ಇಂದ್ರಾದಿ ದೇವತೆಗಳಲ್ಲಿಯೂ ತಾರತಮ್ಯವನ್ನು ಚೆನ್ನಾಗಿ ಅನುಸಂಧಾನ ಮಾಡಿಕೊಳ್ಳುತ್ತ ನಮ್ಮ ಗುರು ವಾಯುದೇವನು ಶ್ರೀಭೂದೇವಿಯರಿಂದ ಆಲಿಂಗಿತನಾದ ನಿನ್ನಲ್ಲಿಯು ಅತ್ಯಂತ ಗಾಢವಾದ ಭಕ್ತಿಯನ್ನು ಮಾಡುತ್ತಿದ್ದಾನೆ ಆದ್ದರಿಂದ ಲಕ್ಷ್ಮೀಸಹಿತ ನಾರಾಯಣನಾದ ನೀನು ಆ ವಾಯುದೇವನನ್ನು ಬೇರೆ ಎಲ್ಲರಿಗಿಂತ ಹೆಚ್ಚು ಚೆನ್ನಾಗಿ ಕಾಪಾಡುತ್ತಿರುವಿ

'ಈ' ಎಂದರೆ ಮಹಾಲಕ್ಷ್ಮಿ 'ಅ' ಎಂದರೆ ಪರಮಾತ್ಮ 'ಈ ಅ'ಗಳು ಸೇರಿ 'ಯ' ಎಂದಾಗುವುದರಿಂದ ಲಕ್ಷ್ಮೀಸಹಿತನಾದ ನಾರಾಯಣ ಎಂಬ ಅರ್ಥ ಸಿಗುತ್ತದೆ

## ವಾಯುದೇವ, ನೀನು ನಮ್ಮನ್ನು ಚೆನ್ನಾಗಿ ಕಾಪಾಡುವಿ

ವಾಯುದೇವ, **ಅಖಿಲಗುಣಗಣೈಃ**-ಎಲ್ಲ ಗುಣ ಸಮೂಹಗಳಿಂದಲೂ **ವಿಷ್ಣೋಃ**-ವಿಷ್ಣುವಿಗೆ **ಸರ್ವೋತ್ತಮತ್ವಾತ್**-ಸರ್ವೋತ್ತಮತ್ವವಿರುವುದರಿಂದ **ಶ್ರೀಧರಾಭ್ಯಾಂ**-ಶ್ರೀಭೂದೇವಿಯರಿಂದ **ಆ ಶ್ಲಿಷ್ಟೇ** - ಆಲಿಂಗಿತನಾದ **ತತ್ರ**-ಆ ಹರಿಯಲ್ಲಿ **ಗರಿಷ್ಠಾಂ**-ಎಲ್ಲರಿಗಿಂತ ಹೆಚ್ಚಿನ **ಭಕ್ತಿಂ** - ಭಕ್ತಿಯನ್ನೂ **ಅಥ** - ಅನಂತರ **ಅಮುಂ ಪ್ರತಿ** - ಆ ಹರಿಗೆ **ಪರಿವಾರಾತ್ಮನಾ** - ಪರಿವಾರರೂಪದಿಂದ **ಸೇವಕೇಷು**-ಸೇವಕರಾದ **ವಿರಿಂಚ-ಬ್ರಹ್ಮನೂ** **ಶ್ವಸನ**-ವಾಯುವೂ **ವಿಹಗಪ**-ಗರುಡನೂ **ಅನಂತ**-ಶೇಷನೂ **ರುದ್ರ**-ರುದ್ರನೂ **ಇಂದ್ರ**-ಇಂದ್ರನೂ **ಪೂರ್ವಕೇಷು**-ಇವರೆ ಮೊದಲಾದವರಲ್ಲಿ **ತಾರತಮ್ಯಂ**- ತಾರತಮ್ಯವನ್ನು **ಆಧ್ಯಾಯನ್**-ಚೆನ್ನಾಗಿ ಅನುಸಂಧಾನ ಮಾಡುತ್ತ **ತತ್ರ**- ಅವರಲ್ಲಿಯೂ **ಭಕ್ತಿಂ**-ಭಕ್ತಿಯನ್ನು **ಯಃ**-ಯಾರು **ಸಂಧತ್ತೇ**-ಇಡುವನೊ **ತಂ**-ಅವನನ್ನು **ಅಸ್ಮದ್**

**ಗುರುಃ**-ನಮ್ಮ ಗುರುವಾದ **ವಾಯುಃ ಭವಾನ್**- ವಾಯು ದೇವನಾದ ನೀನು **ಸದಾ**-ಯಾವಾಗಲೂ **ಸ್ಫುಟಂ**-ಚನ್ನಾಗಿ **ಅವತಿ**- ರಕ್ಷಿಸುವಿ

ವಾಯುದೇವ, ಜ್ಞಾನಾನಂದಾದಿ ಸಕಲ ಗುಣಗಳಿಂದಲೂ ಹರಿಯು ಸರ್ವೋತ್ತಮನಾದ್ದರಿಂದ ಶ್ರೀಭೂದೇವಿಯರಿಂದ ಆಲಿಂಗಿತನಾದ ಆ ಹರಿಯಲ್ಲಿ ಎಲ್ಲರಿಗಿಂತ ಹೆಚ್ಚಿನ ಭಕ್ತಿಯನ್ನು, ಅನಂತರ ಅವನಿಗೆ ಪರಿವಾರ ರೂಪದಿಂದ ಸೇವಕರಾದ ಬ್ರಹ್ಮಾದಿ ದೇವತೆಗಳಲ್ಲಿ ತಾರತಮ್ಯವನ್ನು ಸರಿಯಾಗಿ ತಿಳಿದು ಅವರಲ್ಲಿಯೂ ಭಕ್ತಿಯನ್ನು ಯಾರು ಮಾಡುವನೊ ಅವನನ್ನು ನಮ್ಮ ಗುರುವಾದ ವಾಯುದೇವನಾದ ನೀನು ಸದಾ ಚನ್ನಾಗಿ ಕಾಪಾಡುವಿ

-೧೬-

**ತತ್ವಜ್ಞಾನ್ ಮುಕ್ತಿಭಾಜಃ**
**ಸುಖಯಸಿ ಹಿ ಗುರೋ ಯೋಗ್ಯತಾತಾರತಮ್ಯಾದ್**
**ಆಧತ್ಸೇ ಮಿಶ್ರಬುದ್ಧೀಂ -**
**ಸ್ತ್ರಿದಿವನಿರಯಭೂ ಗೋಚರಾನ್ನಿತ್ಯಬದ್ಧಾನ್ ।**
**ತಾಮಿಸ್ರಾಂಧಾದಿಕಾಖ್ಯೇ**
**ತಮಸಿ ಸುಬಹುಲಂ ದುಃಖಯಸ್ಯನ್ಯಥಾಜ್ಞಾನ್**
**ವಿಷ್ಣೋರಾಜ್ಞಾಭಿರಿತ್ಥಂ**
**ಶ್ರುತಿಶತಮಿತಿಹಾಸಾದಿ ಚಾಕರ್ಣಯಾಮಃ ॥**

**ಹರಿ, ನೀನು ತ್ರಿವಿಧ ಜೀವರಿಗೆ ತ್ರಿವಿಧ ಫಲ ನೀಡುವಿ :**

**ಗುರೋ**-ಲೋಕಗುರುವಾದ ಹರಿಯೆ **ವಿಷ್ಣೋಃ** - ವ್ಯಾಪಕನಾದ ನಿನ್ನ **ಆಜ್ಞಾಭಿಃ** - ಆಜ್ಞಾರೂಪವಾದ ಶ್ರುತಿಸ್ಮೃತಿಗಳಿಂದ **ತತ್ವಜ್ಞಾನ್** - ತತ್ವವನ್ನು ಯಥಾರ್ಥವಾಗಿ ತಿಳಿದುಕೊಂಡಿರುವವರನ್ನು **ಮುಕ್ತಿಭಾಜಃ** - ಮುಕ್ತರನ್ನಾಗಿ ಮಾಡಿ **ಯೋಗ್ಯತಾ ತಾರತಮ್ಯಾದ್** - ಅವರ ಸ್ವರೂಪ ಯೋಗ್ಯತೆಯ ತಾರತಮ್ಯಕ್ಕೆ ಅನುಗುಣವಾಗಿ **ಸುಬಹುಲಂ** - ಬಹಳವಾಗಿ

**ಸುಖಯಸಿ**-ಸುಖಪಡಿಸುವಿ **ಮಿಶ್ರಬುದ್ಧೀನ್**-ಯಥಾರ್ಥ ಅಯಥಾರ್ಥ ಮಿಶ್ರವಾಗಿ ತಿಳಿದುಕೊಂಡ **ನಿತ್ಯಬದ್ಧಾನ್**- ನಿತ್ಯ ಸಂಸಾರಿಗಳನ್ನು **ಯೋಗ್ಯತಾತಾರತಮ್ಯಾದ್**-ಯೋಗ್ಯತಾ ತಾರತಮ್ಯಾನುಸಾರ **ತ್ರಿದಿವ ನಿರಯ ಭೂ ಗೋಚರಾನ್**-ಸ್ವರ್ಗ ನರಕ ಭೂಲೋಕಗಳಲ್ಲಿ ಸುತ್ತುವಂತೆ **ಆಧತ್ಸೇ**-ಮಾಡುವಿ **ಅನ್ಯಥಾಜ್ಞಾನ್**-ಅಯಥಾರ್ಥವಾಗಿಯೇ ತಿಳಿದವರನ್ನು **ತಾಮಿಸ್ರ**-ತಾಮಿಸ್ರವೆಂಬ **ಅಂಧಾದಿಕ**-'ಅಂಧ' ಎಂಬ ಪದ ಆದಿಯಾಗಿ ಉಳ್ಳ **ಆಖ್ಯೇ**-ಹೆಸರುಳ್ಳ **ತಮಸಿ**-ಅಂಧಂತಮಸ್ಸಿನಲ್ಲಿ **ಯೋಗ್ಯತಾತಾರತಮ್ಯಾದ್**-ಯೋಗ್ಯತಾ ತಾರತಮ್ಯಾನುಸಾರವಾಗಿ **ಸುಬಹುಲಂ**-ಬಹಳವಾಗಿ **ದುಃಖಯಸಿ**-ದುಃಖ ಪಡಿಸುವಿ **ಹಿ**-ಇದು ಪ್ರಸಿದ್ಧ **ಇತ್ಥಂ**-ಹೀಗೆ **ಶ್ರುತಿ ಶತಂ**-ನೂರಾರು ಶ್ರುತಿವಾಕ್ಯಗಳನ್ನೂ **ಇತಿಹಾಸಾದಿ ಚ**-ಭಾರತಾದಿ ವಚನಗಳನ್ನೂ **ಆಕರ್ಣಯಾಮಃ**-ಕೇಳುತ್ತಿದ್ದೇವೆ

ಲೋಕ ಗುರುವಾದ ಹರಿಯೇ 'ಶ್ರುತಿ ಸ್ಮೃತೀ ಹರೇರಾಜ್ಞೇ' ಎಂಬ ವಚನಾನುಸಾರ ಸರ್ವತ್ರ ವ್ಯಾಪಕನಾದ ನಿನ್ನ ಆಜ್ಞಾರೂಪವಾದ ಶ್ರುತಿ ಸ್ಮೃತಿಗಳಿಂದ ನಿನ್ನ ಬಗ್ಗೆ ಯಥಾರ್ಥಜ್ಞಾನ ಪಡೆದವರಿಗೆ ನೀನು ಅಪರೋಕ್ಷವಿತ್ತು, ಮುಕ್ತರನ್ನಾಗಿ ಮಾಡಿ, ಸ್ವರೂಪಯೋಗ್ಯತಾ ತಾರತಮ್ಯಾನುಸಾರವಾಗಿ ಮುಕ್ತಿಯಲ್ಲಿ ಬಹು ಸುಖ ಉಣಿಸುವಿ ನಿನ್ನ ಬಗ್ಗೆ ಕೆಲವು ಅಂಶದಲ್ಲಿ ಯಥಾರ್ಥವಾಗಿ ಕೆಲವು ಅಂಶದಲ್ಲಿ ಅಯಥಾರ್ಥವಾಗಿ ಹೀಗೆ ಮಿಶ್ರರೀತಿಯಿಂದ ತಿಳಿದುಕೊಂಡ ನಿತ್ಯಸಂಸಾರಿ ಜೀವರನ್ನು ಸ್ವರ್ಗಪ್ರಚುರ ಭೂ ಪ್ರಚುರಾದಿ ಸ್ವರೂಪ ಯೋಗ್ಯತಾ ತಾರತಮ್ಯಾನುಸಾರ ಸುಖದುಃಖ ಉಣಿಸುತ್ತ ಸ್ವರ್ಗ ನರಕ ಭೂಮಿಗಳಲ್ಲಿ ಸುತ್ತುವಂತೆ ಮಾಡುವಿ ನಿನ್ನ ಬಗ್ಗೆ ಅಯಥಾರ್ಥವಾಗಿಯೇ ತಿಳಿದುಕೊಂಡವರನ್ನು ಸ್ವರೂಪಯೋಗ್ಯತಾ ತಾರತಮ್ಯಾನುಸಾರ ಅಂಧಂತಮಸ್ಸಿನಲ್ಲಿ ಬಹಳ ದುಃಖಪಡಿಸುವಿ ಇದು ಪ್ರಸಿದ್ಧ

ಶ್ಲಕ್ಷ್ಣೇ ವೀರಮುಗ್ರಮುಗ್ರಂ ದಮಾಯನ್
ಅನ್ಯಮನ್ಯಮತಿ ನೇನೀಯಮಾನಃ |

ಏಧಮಾನದ್ವಿಳುಭಯಸ್ಯ ರಾಜಾ

ಚೋಷ್ಕೂಯತೇ ವಿಶ ಇಂದ್ರೋ ಮನುಷ್ಯಾನ್॥

ಹೀಗೆ ನೂರಾರು ಶ್ರುತಿ ವ್ಯಾಕಗಳನ್ನೂ ಮಹಾಭಾರತಾದಿ ವಚನಗಳನ್ನೂ ಕೇಳುತ್ತಿದ್ದೇವೆ

## ವಾಯುದೇವ, ನೀನು ತ್ರಿವಿಧ ಜೀವರಿಗೆ ತ್ರಿವಿಧ ಫಲ ನೀಡುವಿ

**ಗುರೋಃ** - ಲೋಕಗುರುವಾದ ವಾಯುದೇವನೆ, **ವಿಷ್ಣೋಃ** - ವಿಷ್ಣುವಿನ **ಆಜ್ಞಾಭಿಃ**-ಆಜ್ಞಾನುಸಾರವಾಗಿ **ತತ್ವಜ್ಞಾನ್** - ಯಥಾರ್ಥಜ್ಞಾನಿಗಳನ್ನು **ಮುಕ್ತಿಭಾಜಃ** - ಮುಕ್ತರನ್ನಾಗಿ ಮಾಡಿ **ಯೋಗ್ಯತಾತಾರತಮ್ಯಾದ್** - ಯೋಗ್ಯತಾ ತಾರತಮ್ಯಾನುಸಾರವಾಗಿ **ಸುಬಹುಲಂ** - ಬಹಳವಾಗಿ **ಸುಖಯುಸಿ** - ಸುಖಿ ಪಡಿಸುವಿ **ಮಿಶ್ರಬುದ್ಧೀನ್** - ಯಥಾರ್ಥಾಯಥಾರ್ಥ ಮಿಶ್ರವಾಗಿ ತಿಳಿದ **ನಿತ್ಯಬದ್ಧಾನ್** - ನಿತ್ಯಸಂಸಾರಿಗಳನ್ನು **ಯೋಗ್ಯತಾತಾರತಮ್ಯಾದ್** - ಯೋಗ್ಯತಾ ತಾರತಮ್ಯಾನುಸಾರವಾಗಿ **ತ್ರಿದಿವ ನಿರಯ ಭೂ ಗೋಚರಾನ್** - ಸ್ವರ್ಗನರಕ ಭೂಲೋಕಗಳಲ್ಲಿ ಸುತ್ತುವಂತೆ **ಆಧತ್ಸೇ** - ಮಾಡುವಿ **ಅನ್ಯಥಾಜ್ಞಾನ್** - ಅಯಥಾರ್ಥಜ್ಞಾನಿಗಳನ್ನು **ತಾಮಿಸ್ರ** - ತಾಮಿಸ್ರವೆಂಬ **ಅಂಧಾದಿಕ** -ಅಂಧ ಎಂಬ ಪದವೆ ಆದಿಯಾಗಿ ಉಳ್ಳ **ಆಖ್ಯೇ** - ಹೆಸರುಳ್ಳ **ತಮಸಿ**-ಅಂಧಂತಮಸ್ಸಿನಲ್ಲಿ **ಯೋಗ್ಯತಾ ತಾರತಮ್ಯಾದ್**-ಯೋಗ್ಯತಾತಾರತಮ್ಯಾನುಸಾರವಾಗಿ **ಸುಬಹುಲಂ**-ಬಹಳವಾಗಿ **ದುಃಖಯುಸಿ**-ದುಃಖಪಡಿಸುವಿ **ಹಿ**-ಇದು ಪ್ರಸಿದ್ಧ **ಇತ್ಥಂ**-ಹೀಗೆ **ಶ್ರುತಿ ಶತಂ**-ನೂರಾರು ಶ್ರುತಿ ವಾಕ್ಯಗಳನ್ನೂ **ಇತಿಹಾಸಾದಿ ಚ**-ಭಾರತಾದಿ ವಚನಗಳನ್ನೂ **ಆಕರ್ಣಯಾಮಃ**-ಕೇಳುತ್ತಿದ್ದೇವೆ

ಲೋಕಗುರು ವಾಯುದೇವನೆ, ನೀನು ವಿಷ್ಣುವಿನ ಬಗ್ಗೆ ಯಥಾರ್ಥವಾಗಿ ತಿಳಿದ ಮುಕ್ತಿಯೋಗ್ಯರನ್ನು ವಿಷ್ಣುವಿನ ಆಜ್ಞಾನುಸಾರವಾಗಿ ಮುಕ್ತರನ್ನಾಗಿ ಮಾಡಿ ಸ್ವರೂಪಯೋಗ್ಯತಾ ತಾರತಮ್ಯಾನುಸಾರವಾಗಿ ಮುಕ್ತಿಯಲ್ಲಿ ಅವರಿಗೆ ಬಹುಸುಖ ಉಣಿಸುವಿ ವಿಷ್ಣುವಿನ ಬಗ್ಗೆ ಕೆಲವು ಅಂಶ ಯಥಾರ್ಥವಾಗಿಯೂ ಕೆಲವು ಅಂಶ ಅಯಥಾರ್ಥವಾಗಿಯೂ ತಿಳಿದುಕೊಂಡ ನಿತ್ಯಸಂಸಾರಿ ಜೀವರನ್ನು ಸ್ವರ್ಗಪ್ರಮುಖಾದಿ ಸ್ವರೂಪ ಯೋಗ್ಯತಾತಾರತಮ್ಯಾನುಸಾರ ಸ್ವರ್ಗ ನರಕ

ಪುರುಷಗಳಲ್ಲಿ ಸುತ್ತುವಂತೆ ಮಾಡುವಿ. ವಿಷ್ಣುವಿನ ಬಗ್ಗೆ ಅಯಥಾರ್ಥವಾಗಿಯೇ ತಿಳಿದವರನ್ನು ಸ್ವರೂಪ ಯೋಗ್ಯತಾ ತಾರತಮ್ಯಾನುಸಾರವಾಗಿ ಅಂಧಂತಮಸ್ಸಿನಲ್ಲಿ ಬಹಳ ದುಃಖ ಪಡಿಸುವಿ. ಇದು ಪ್ರಸಿದ್ಧ 'ವಾಯುನಾ ಹಿ ಸರ್ವೇ ಲೋಕಾ ನೇನೀಯಂತೇ' ಹೀಗೆ ನೂರಾರು ಶ್ರುತಿ ವಾಕ್ಯಗಳನ್ನೂ ಮಹಾಭಾರತಾದಿ ವಚನಗಳನ್ನೂ ಕೇಳುತ್ತಿದ್ದೇವೆ

-೧೭-

**ವಂದೇಽಹಂ ತಂ ಹನೂಮಾನ್**
**ಇತಿ ಮಹಿತಮಹಾಪೌರುಷೋ ಬಾಹುಶಾಲೀ**
**ಖ್ಯಾತಸ್ತೇಽಗ್ರ್ಯೋಽವತಾರಃ**
**ಸಹಿತ ಇಹ ಬಹುಬ್ರಹ್ಮಚರ್ಯಾದಿಧರ್ಮೈಃ ।**
**ಸಸ್ನೇಹಾನಾಂ ಸಹಸ್ವಾನ್**
**ಅಹರಹರಹಿತಂ ನಿರ್ದಹನ್ ದೇಹಭಾಜಾಂ**
**ಅಂಹೋಮೋಹಾಪಹೋ ಯಃ**
**ಸ್ಪೃಹಯತಿ ಮಹತೀಂ ಭಕ್ತಿಮದ್ಯಾಪಿ ರಾಮೇ ॥**

**ಶ್ರೀರಾಮನಿಗೆ ನಮೋ ಎನ್ನುವೆನು**

**ಹನೂಮಾನ್** - ಜ್ಞಾನಪೂರ್ಣವಾದುದು **ಮಹಿತ ಮಹಾಪೌರುಷಃ** ಲೋಕಮಾನ್ಯವಾದ ಮಹಾಪೌರುಷ ಉಳ್ಳುದು **ಬಾಹುಶಾಲೀ** - ಬುಜಪರಾಕ್ರಮ ಉಳ್ಳುದು **ಬಹು ಬ್ರಹ್ಮಚರ್ಯಾದಿ ಧರ್ಮೈಃ**-ಅನೇಕ ಬ್ರಹ್ಮಚರ್ಯಾದಿ ಧರ್ಮಗಳಿಂದ **ಸಹಿತಃ** - ಯುಕ್ತವಾದುದು **ಸಹಸ್ವಾನ್**-ಬಲಿಷ್ಠವಾದುದು **ಸಸ್ನೇಹಾನಾಂ** - ಭಕ್ತಿಉಳ್ಳ **ದೇಹಭಾಜಾಂ** - ಶರೀರಧಾರಿಗಳಿಗೆ **ಅಹಿತಂ**-ಅಹಿತಕರವಾದ ಅರಿಷಡ್ವರ್ಗವನ್ನು **ಅಹರಹಃ**-ಪ್ರತಿದಿನ **ನಿರ್ದಹನ್**- ಸುಡುವಂಥಹುದು **ಅಂಹಃ**-ಪಾಪವನ್ನೂ **ಮೋಹ** - ಅಜ್ಞಾನವನ್ನೂ **ಅಪಹಃ** - ಪರಿಹರಿಸುವಂಥಹುದು **ಇತಿ** - ಎಂದು **ಇಹ** - ಈ ಲೋಕದಲ್ಲಿ **ಯಃ** - ಯಾವ **ತೇ**-ನಿನ್ನ **ಅಗ್ರ್ಯಃ**-ರಾಮ ಕೃಷ್ಣ ವೇದವ್ಯಾಸರಲ್ಲಿ ಮೊದಲನೆಯದಾದ **ಅವತಾರಃ**-ರಾಮಾವತಾರವು **ಖ್ಯಾತಃ**-

ಪ್ರಸಿದ್ಧವಾಗಿದೆಯೋ ಮತ್ತು **ಅದ್ಯಾಪಿ**-ಇಂದಿಗೂ ಕೂಡ **ರಾಮೇ**-ರಮಣ ರೂಪವಾದ ಮುಕ್ತಿಗಾಗಿ **ಮಹತೀಂ**-ಮಹತ್ತಾದ **ಭಕ್ತಿಂ**-ಭಕ್ತಿಯನ್ನು **ರಾಮೇ**- ಸ್ವರೂಪತಃ ರಮಣರೂಪರಾದ ಸಜ್ಜನರಲ್ಲಿ **ಸ್ಪೃಹಯತಿ**- ಅಪೇಕ್ಷಿಸುವುದೋ **ತಂ**- ಆ ರಾಮಾವತಾರವನ್ನು **ಅಹಂ**-ನಾನು **ವಂದೇ**-ನಮಿಸುವೆನು

ಹರಿಯೇ, ರಾಮಕೃಷ್ಣವೇದವ್ಯಾಸರೆಂಬ ನಿನ್ನ ಮೂರು ಅವತಾರಗಳಲ್ಲಿ ಮೊದಲನೆಯದು ರಾಮಾವತಾರ ಇದು ಹನು ಶಬ್ದೋ ಜ್ಞಾನವಾಚೀ ಎಂಬಂತೆ ಜ್ಞಾನಪೂರ್ಣವಾದುದು, ಲೋಕಮಾನ್ಯವಾದ ಮಹಾಪೌರುಷ ಉಳ್ಳುದು, ಭುಜಪರಾಕ್ರಮ ಉಳ್ಳುದು, ಬ್ರಹ್ಮಚರ್ಯಗೃಹಸ್ಥಾದಿ ಅನೇಕ ಧರ್ಮಯುಕ್ತವಾದುದು, ಬಲಿಷ್ಠವಾದುದು, ಭಕ್ತರಿಗೆ ಅಹಿತಕರವಾದ ಅರಿಷಡ್ವರ್ಗವನ್ನು ಪ್ರತಿದಿನ ಸುಡುವಂಥದು ಪಾಪ ಅಜ್ಞಾನಗಳನ್ನು ಪರಿಹರಿಸುವಂಥಹುದು ಎಂದು ಮುಂತಾಗಿ ಲೋಕದಲ್ಲಿ ಪ್ರಸಿದ್ಧವಾಗಿದ ಮತ್ತು ಅದು ಇಂದಿಗೂ ಕಿಂಪುರುಷಖಂಡ ಸ್ವರ್ಗಲೋಕ ಸತ್ಯಲೋಕಾದಿಗಳಲ್ಲಿ ಪ್ರತ್ಯಕ್ಷವೆ ಇದ್ದು ಸ್ವರೂಪತ ಸುಖರೂಪರಾದ ಸಾತ್ವಿಕ ಭಕ್ತಜನರಿಂದ ಏನನ್ನೂ ಬಯಸದೆ ಕೇವಲ ಉತ್ತಮ ಭಕ್ತಿಯನ್ನು ಮಾತ್ರ ಅವರ ಸುಖರೂಪವಾದ ಮುಕ್ತಿಗಾಗಿಯೆ ಬಯಸುತ್ತಿದೆ ಅಂಥ ರಾಮಾವತಾರವನ್ನು ನಾನು ವಂದಿಸುವೆನು

**ಶ್ರೀಹನುಮನಿಗೆ ನಮೋ ಎಂಬೆನು .**

**ಹನೂಮಾನ್** - ಜ್ಞಾನಪೂರ್ಣವಾದುದರಿಂದ ಹನುಮಂತನೆಂಬ ಹೆಸರುಳ್ಳುದು **ಮಹಿತ ಮಹಾ ಪೌರುಷಃ** - ಲೋಕಮಾನ್ಯವಾದ ಮಹಾಪೌರುಷ ಉಳ್ಳುದು **ಬಾಹುಶಾಲೀ** - ಭುಜಪರಾಕ್ರಮ ಉಳ್ಳದು, **ಬಹು ಬ್ರಹ್ಮಚರ್ಯಾದಿ ಧರ್ಮೈಃ** - ಅನೇಕ ಬ್ರಹ್ಮಚರ್ಯಾದಿಧರ್ಮಗಳಿಂದ **ಸಹಿತಃ** - ಯುಕ್ತವಾದುದು **ಸಹಸ್ವಾನ್** - ಬಲಿಷ್ಠವಾದುದು **ಸಸ್ನೇಹಾನಾಂ** - ಭಕ್ತಿಯುಳ್ಳ **ದೇಹಭಾಜಾಂ**- ಶರೀರಧಾರಿಗಳಿಗೆ **ಅಹಿತಂ**-ಅಹಿತಕರವಾದ ಅರಿಷಡ್ವರ್ಗವನ್ನು **ಅಹರಹಃ** - ಪ್ರತಿದಿನ **ನಿರ್ದಹನ್** - ಸುಡುವಂಥಹುದು **ಅಂಹಃ** - ಪಾಪವನ್ನು **ಮೋಹ**

- ಅಜ್ಞಾನವನ್ನು **ಅಪಹಃ** - ಪರಿಹರಿಸುವಂಥದು **ಇತಿ** - ಎಂದು **ಇಹ**- ಈ ಲೋಕದಲ್ಲಿ **ಯಃ**-ಯಾವ **ತೇ** - ನಿನ್ನ **ಅಗ್ರ್ಯಃ** - ಮೊದಲನೆಯದಾದ ಹನುಮದವತಾರವು **ಖ್ಯಾತಃ** - ಪ್ರಸಿದ್ಧವಾಗಿದೆಯೋ ಮತ್ತು **ಅದ್ಯಾಪಿ** - ಇಂದಿಗೂ ಕೂಡ **ರಾಮೇ** - ಶ್ರೀರಾಮನ ವಿಷಯದಲ್ಲಿ **ಮಹತೀಂ** - ಮಹತ್ತಾದ **ಭಕ್ತಿಂ** - ಭಕ್ತಿಯನ್ನು **ಸ್ಪೃಹಯತಿ**-ಬಯಸುತ್ತಿದೆಯೋ **ತಂ**-ಆ ಹನುಮದವತಾರವನ್ನು **ಅಹಂ**-ನಾನು **ವಂದೇ**-ನಮಿಸುವೆನು

ವಾಯುದೇವ, ಹನುಮ ಭೀಮ ಮಧ್ವರೆಂಬ ಮೂರು ಅವತಾರಗಳಲ್ಲಿ ಮೊದಲನೆಯದು ನಿನ್ನ ಹನುಮದವತಾರ ಇದು 'ಹನುಶಬ್ದೋ ಜ್ಞಾನವಾಚೀ' ಎಂಬಂತೆ ಜ್ಞಾನಪೂರ್ಣವಾದ್ದರಿಂದ ಹನುಮಂತನೆಂಬ ಹೆಸರುಳ್ಳದು, ಲೋಕಮಾನ್ಯವಾದ ಮಹಾಪೌರುಷ ಉಳ್ಳದು, ಭುಜ ಪರಾಕ್ರಮ ಉಳ್ಳದು, ಬ್ರಹ್ಮಚರ್ಯ ವಾನಪ್ರಸ್ಥಾದಿ ಅನೇಕ ಧರ್ಮಯುಕ್ತವಾದುದು, ಬಲಿಷ್ಠವಾದುದು ಜಗತ್ತಿಗೆ ಅಹಿತಕರವಾದ ಅರಿಷ್ಟವನ್ನು ಪ್ರತಿದಿನ ನುಂಗುವಂಥದು, ಪಾಪ ಅಜ್ಞಾನಗಳನ್ನು ಪರಿಹರಿಸುವಂಥದು ಎಂದು ಮುಂತಾಗಿ ಲೋಕದಲ್ಲಿ ಪ್ರಸಿದ್ಧವಾಗಿದೆ ಮತ್ತು ಅದು ಚಿರಂಜೀವಿಯಾಗಿ ಇಂದಿಗೂ ಕಿಂಪುರುಷಖಂಡದಲ್ಲಿ ಪ್ರತ್ಯಕ್ಷ ಇದ್ದು ಶ್ರೀರಾಮನಲ್ಲಿ ದಿನೇ ದಿನೇ ಹೆಚ್ಚುವಂಥ ಮಹತ್ತಾದ ಭಕ್ತಿಯೊಂದನ್ನೇ ಬಯಸುತ್ತಿದ ಅಂಥ ಹನುಮದವತಾರವನ್ನು ನಾನು ವಂದಿಸುವೆನು

-೧೮-

**ಪ್ರಾಕ್ ಪಂಚಾಶತ್ಸಹಸ್ರೈಃ**
**ವ್ಯವಹಿತಮಹಿತಂ ಯೋಜನೈಃ ಪರ್ವತಂ ತ್ವಂ**
**ಯಾವತ್ ಸಂಜೀವನಾದ್ಯೌ -**
**ಷಧನಿಧಿಮಧಿಕಪ್ರಾಣ ಲಂಕಾಮನೈಷೀಃ ।**
**ಅದ್ರಾಕ್ಷೀದುತ್ಪತಂತಂ**
**ತತ ಉತ ಗಿರಿಮುತ್ಪಾಟಯಂತಂ ಗೃಹೀತ್ವಾ-**
**ಯಾಂತಂ ಖೇ ರಾಘವಾಂಘ್ರೌ**
**ಪ್ರಣತಮಪಿ ತದೈಕಕ್ಷಣೇ ತ್ವಾಂ ಹಿ ಲೋಕಃ ॥**

## ಶ್ರೀರಾಮ, ನಿನ್ನ ಬಂಟ ಹನುಮ ಅಹುದು

**ಅಧಿಕಪ್ರಾಣ**-ಅಧಿಕಬಲಶಾಲಿಯಾದ **ರಾಘವ**-ರಾಮನೆ, **ತ್ವಂ**-ನೀನು **ಯಾವತ್**-ಯಾವಾಗ **ಪ್ರಾಕ್**-ಮೊದಲಿಗೆ **ಗಿರಿಂ**-ವಾಯುಸ್ವರೂಪನಾದ ಹನುಮಂತನನ್ನು **ಲಂಕಾಂ**-ಲಂಕೆಗೆ **ಅನ್ವೈಷೀಃ**-ಸೀತಾನ್ವೇಷಣೆಗಾಗಿ ಕಳಿಸಿದೆಯೊ **ತದಾ**-ಆಗ **ಉತ್ಪತಂತಂ**-ಮಹೇಂದ್ರಬೆಟ್ಟದ ಮೇಲಿಂದ ಹನುಮಂತನು ಲಂಕೆಯ ಕಡೆಗೆ ಹಾರುವುದನ್ನೂ ಅಲ್ಲಿ **ಗಿರಿಂ**-ಬೆಟ್ಟವನ್ನು **ಉತ್ಪಾಟಯಂತಂ**-ರಾಕ್ಷಸರ ಮೇಲೆಸೆಯಲು ಕೀಳುವುದನ್ನು **ಗೃಹೀತ್ವಾ**-ಸೀತಾಸಂದೇಶವನ್ನೂ ಚೂಡಾಮಣಿಯನ್ನೂ ಹಿಡಿದುಕೊಂಡು **ಖೇ**-ಆಕಾಶದಲ್ಲಿ **ಆಯಾಂತಂ**-ಹಿಂತಿರುಗಿ ಬರುವುದನ್ನೂ **ತ್ವಾಂ**-ನಿನ್ನನ್ನು **ಅಂಘ್ರೌ**-ಪಾದದಲ್ಲಿ **ಪ್ರಣತಂ ಅಪಿ**-ನಮಸ್ಕರಿಸುವುದನ್ನೂ **ಲೋಕಃ**-ಲೋಕವು **ಅದ್ರಾಕ್ಷೀತ್**-ನೋಡಿತು **ಹಿ**-ಇದು ಪ್ರಸಿದ್ಧ **ತತ ಉತ**-ಅನಂತರವೂ **ಯಾವತ್**-ಯಾವಾಗ **ತ್ವಂ**-ನೀನು **ಗಿರಿಂ**-ಆ ಹನುಮಂತನನ್ನು **ಪಂಚಾಶತ್ ಸಹಸ್ರೈಃ**-ಐವತ್ತು ಸಾವಿರ **ಯೋಜನೈಃ**-ಯೋಜನಗಳಷ್ಟು **ವ್ಯವಹಿತಂ**-ದೂರದಲ್ಲಿದ್ದು **ಅಮಿತಂ**-ಬಲುದೊಡ್ಡದಾಗಿದ್ದ **ಸಂಜೀವನಾದಿ** - ಮೃತಸಂಜೀವನಾದಿ **ಔಷಧ**-ಔಷಧಗಳಿಗೆ **ನಿಧಿಂ**-ಆಕರವಾಗಿದ್ದ **ಪರ್ವತಂ**-ಗಂಧಮಾದನ ಪರ್ವತದ ಕಡೆಗೆ **ಅನ್ವೈಷೀಃ**-ಕಳಿಸಿದಿಯೋ **ತದಾ ಉತ**-ಆಗಲೂ **ಗಿರಿಂ**-ಆ ಹನುಮಂತನು **ಏಕಕ್ಷಣೇ**-ಒಂದೇ ಕ್ಷಣದಲ್ಲಿ **ಉತ್ಪತಂತಂ**-ಲಂಕೆಯಿಂದ ಗಂಧಮಾದನ ಕಡೆಗೆ ಹಾರುವುದನ್ನೂ **ಗಿರಿಂ**-ಆ ಬೆಟ್ಟವನ್ನು **ಉತ್ಪಾಟಯಂತಂ**-ಕೀಳುವುದನ್ನೂ **ಗೃಹೀತ್ವಾ**-ಹಿಡಿದುಕೊಂಡು **ಖೇ**-ಆಕಾಶದಲ್ಲಿ **ಆಯಾಂತಂ**-ಬರುವುದನ್ನೂ **ತ್ವಾಂ**-ನಿನ್ನನ್ನು **ಅಂಘ್ರೌ**-ಪಾದದಲ್ಲಿ **ಪ್ರಣತಮಪಿ**-ನಮಿಸುವುದನ್ನೂ **ಲೋಕಃ**-ಲೋಕವು **ಅದ್ರಾಕ್ಷೀತ್**-ನೋಡಿತು **ಹಿ**-ಇದು ಪ್ರಸಿದ್ಧ

ಅಧಿಕ ಬಲಶಾಲಿಯಾದ ಶ್ರೀರಾಮನೆ, ನಿನ್ನ ಬಂಟ ಹನುಮಂತನೆನ್ನುವುದು ನಿಜ. ಏಕೆಂದರೆ ಯಾವಾಗ ನೀನು ಮೊದಲಿಗೆ ಸೀತಾನ್ವೇಷಣೆಗಾಗಿ ಲಂಕೆಗೆ ಹನುಮಂತನನ್ನು ಕಳಿಸಿದಿಯೊ ಆಗ ಅವನು ಮಹೇಂದ್ರ ಬೆಟ್ಟದ ತುದಿಯಿಂದ ಲಂಕೆಗೆ ಹಾರಿದ. ಲಂಕೆಯಲ್ಲಿ ರಾಕ್ಷಸ ಸೈನ್ಯದ ಮೇಲೆ ಬೆಟ್ಟವನ್ನು ಕಿತ್ತೆಸೆದ. ಸೀತಾದೇವಿಯಿಂದ ಸಂದೇಶವನ್ನೂ ಚೂಡಾಮಣಿಯನ್ನೂ ತೆಗೆದುಕೊಂಡು

ಆಕಾಶಮಾರ್ಗವಾಗಿ ಹಿಂತಿರುಗಿ ಬಂದ ನಿನ್ನ ಪಾದದಲ್ಲಿ ನಮಿಸಿದ ಇದನ್ನೆಲ್ಲ ಲೋಕ ಕಣ್ಣಾರ ಕಂಡಿತು. ಲಂಕೆಯ ಯುದ್ಧದಲ್ಲಿ ಇಂದ್ರಜಿತ್ತಿನ ನಾಗಪಾಶದಿಂದ ಕಪಿಸೇನೆಯನ್ನು ಉಳಿಸುವುದಕ್ಕಾಗಿ ನೀನು ಐವತ್ತು ಸಾವಿರ ಯೋಜನಗಳಷ್ಟು ದೂರದ ಗಂಧಮಾದನ ಪರ್ವತದಲ್ಲಿದ್ದ ಮೃತ ಸಂಜೀವನ್ಯಾದಿ ಔಷಧಗಳನ್ನು ತರಲು ಹನುಮಂತನನ್ನು ಕಳಿಸಿದಾಗಲೂ ಆ ಹನುಮಂತನು ಒಂದೇ ಕ್ಷಣದಲ್ಲಿ ಲಂಕೆಯಿಂದ ಬೆಟ್ಟದ ಕಡೆಗೆ ಹಾರುವುದನ್ನೂ, ಆ ಬೆಟ್ಟವನ್ನು ಕೀಳುವುದನ್ನೂ, ಎತ್ತಿ ಹಿಡಿದುಕೊಂಡು ಆಕಾಶದಲ್ಲಿ ಹಾರಿ ಬರುವುದನ್ನೂ, ನಿನ್ನ ಪಾದದಲ್ಲಿ ನಮಿಸುವುದನ್ನೂ ಲೋಕವು ಕಣ್ಣಾರೆ ಕಂಡಿತು. ಇದಲ್ಲವೇ ಪ್ರಸಿದ್ಧವಾಗಿದೆ

**ಹನುಮ, ನೀನಹುದು ರಾಮನ ಬಂಟ!**

**ಅಧಿಕಪ್ರಾಣ**-ಮುಖ್ಯಪ್ರಾಣನೆ **ತ್ವಂ**-ನೀನು **ಪ್ರಾಕ್**-ಹಿಂದೆ ಪಂಚಾಶತ್ **ಸಹಸ್ರೈಃ**-ಐವತ್ತು ಸಾವಿರ **ಯೋಜನೈಃ**-ಯೋಜನಗಳಷ್ಟು **ವ್ಯವಹಿತಂ**-ದೂರದಲ್ಲಿದ್ದು **ಅಮಿತಂ**-ಬಲು ದೊಡ್ಡದಾಗಿದ್ದ **ಸಂಜೀವನಾದಿ**-ಮೃತ ಸಂಜೀವನ ಮುಂತಾದ **ಔಷಧ**-ಔಷಧಗಳಿಗೆ **ನಿಧಿಂ**-ಆಕರವಾಗಿದ್ದ **ಪರ್ವತಂ**-ಗಂಧಮಾದನ ಪರ್ವತವನ್ನು **ಲಂಕಾಂ**-ಲಂಕೆಗೆ **ಅನೈಷೀಃ**-ಒಯ್ದೆಯೋ **ತದಾ**-ಆಗ **ತ್ವಾಂ**-ನೀನು **ಏಕಕ್ಷಣೇ**-ಒಂದೇ ಕ್ಷಣದಲ್ಲಿ **ತತಃ**-ಆ ಲಂಕೆಯಿಂದ **ಉತ್ಪತಂತಂ**-ಬೆಟ್ಟದ ಕಡೆಗ ಹಾರುವುದನ್ನೂ **ಗಿರಿಂ**- ಬೆಟ್ಟವನ್ನು **ಉತ್ಪಾಟಯಂತಂ** - ಕೀಳುವುದನ್ನೂ **ಗೃಹೀತ್ವಾ** - ಹಿಡಿದುಕೊಂಡು **ಖೇ** - ಆಕಾಶದಲ್ಲಿ **ಆಯಾಂತಂ**-ಬರುವುದನ್ನೂ **ಉತ**-ಮತ್ತು **ರಾಘವಾಂಘ್ರೌ**-ರಾಮನ ಪಾದದಲ್ಲಿ **ಪ್ರಣತಂ ಅಪಿ**-ನಮಿಸುವುದನ್ನೂ **ಲೋಕಃ**-ಲೋಕವು **ಅದ್ರಾಕ್ಷೀತ್**-ನೋಡಿತು **ಹಿ**-ಇದು ಪ್ರಸಿದ್ಧ

ಮುಖ್ಯಪ್ರಾಣನೆ, ನೀನು ರಾಮನ ಬಂಟ. ನಿಜ. ಏಕೆಂದರೆ ಹಿಂದ ಲಂಕೆಯ ಯುದ್ಧದಲ್ಲಿ ಇಂದ್ರಜಿತ್ತಿನ ನಾಗಪಾಶದಿಂದ ಬದ್ಧವಾದ ಕಪಿ ಸೈನ್ಯವನ್ನು ಮುಕ್ತಗೊಳಿಸುವುದಕ್ಕಾಗಿ ಐವತ್ತು ಸಾವಿರ ಯೋಜನಗಳಷ್ಟು ದೂರದಲ್ಲಿದ್ದ ಮೃತ ಸಂಜೀವನೀ ಮುಂತಾದ ಔಷಧಗಳಿಗೆ ಆಕರವಾಗಿದ್ದ ಗಂಧಮಾದನ ಪರ್ವತವನ್ನು ಲಂಕೆಗೆ ತಂದೆ. ಆಗ ನೀನು ಒಂದೇ ಕ್ಷಣದಲ್ಲಿ ಲಂಕೆಯಿಂದ ಬೆಟ್ಟದ ಕಡೆಗೆ ಹಾರುವುದನ್ನೂ, ಬೆಟ್ಟವನ್ನು ಕೀಳುವುದನ್ನೂ ಕೈಯಲ್ಲಿ ಹಿಡಿದುಕೊಂಡು

ಆಕಾಶದಲ್ಲಿ ಹಾರಿ ಒದುವುದನ್ನೂ, ರಾಮನ ಪಾದದಲ್ಲಿ ನಮಿಸುವುದನ್ನೂ ಲೋಕ ಕಣ್ಣಾರೆ ಕಂಡಿತು. ಇದು ಪ್ರಸಿದ್ಧ

'ಗಿರಿರ್ವಾಯುಃ ಸಮುದ್ದಿಷ್ಟಃ' ಎಂದು ಮುಂತಾಗಿ ಗಿರಿ ಎಂದರೆ ವಾಯುದೇವನೆಂಬ ಅರ್ಥ ಐತರೇಯ ಉಪನಿಷದ್ ಭಾಷ್ಯ ಭಾಗವತ ತಾತ್ಪರ್ಯಗಳಲ್ಲಿ ಉಕ್ತವಾಗಿದೆ

ಸಂಜೀವನಾದಿ ಔಷಧಗಳೆಂದರೆ,

೧ ಮೃತ ಸಂಜೀವನೀ-ಸತ್ತವರನ್ನು ಬದುಕಿಸುವುದು

೨ ಸಂಧಾನಕರಣೀ-ತುಂಡಾದ ಅವಯವಗಳನ್ನು ಜೋಡಿಸುವುದು

೩ ವಿಶಲ್ಯಕರಣೀ-ಶಸ್ತ್ರಗಳನ್ನು ಮೈಯಿಂದ ತೆಗೆಯುವುದು

೪ ಸವರ್ಣಕರಣೀ-ಹಿಂದಿನ ಮೈ ಬಣ್ಣವನ್ನೆ ಪುನಃ ತರುವುದು

-೧೯-

**ಕ್ಷಿಪ್ತಃ ಪಶ್ಚಾತ್ ಸಲೀಲಂ**
**ಶತಮತುಲಮತೇ ಯೋಜನಾನಾಂ ಸ ಉಚ್ಚಃ**
**ತಾವದ್ ವಿಸ್ತಾರವಾಂಶ್ಚಾ -**
**ಪ್ಯುಪಲಲವ ಇವ ವ್ಯಗ್ರಬುದ್ಧ್ಯಾ ತ್ವಯಾತಃ ।**
**ಸ್ವಸ್ವಸ್ಥಾನಸ್ಥಿತಾತಿ -**
**ಸ್ಥಿರಶಕಲಶಿಲಾಜಾಲಸಂಶ್ಲೇಷನಷ್ಟ-**
**ಚ್ಛೇದಾಂಕಃ ಪ್ರಾಗಿವಾಭೂತ್**
**ಕಪಿವರವಪುಷಸ್ತೇ ನಮಃ ಕೌಶಲಾಯ ॥**

**ಶ್ರೀರಾಮ, ನಿನ್ನ ಕೌಶಲ್ಯಕ್ಕೆ ನಮೋ !**

**ಅತುಲಮತೇ** - ಅನುಪಮ ಬುದ್ಧಿವಂತನಾದ ರಾಮನೆ **ಸ್ವಸ್ವಸ್ಥಾನಸ್ಥಿತ** - ತಮ್ಮ ತಮ್ಮ ಸ್ಥಾನದಲ್ಲ ಇದ್ದ **ಅತಿಸ್ಥಿರ** - ಅತ್ಯಂತ ಸ್ಥಿರವಾದ

**ಶಕಲ**-ಭಾಗಗಳುಳ್ಳ **ಶಿಲಾ**-ಕಲ್ಲು ಒಂಡೆಗಳ **ಜಾಲ**-ಸಮೂಹದ **ಸಂಶ್ಲೇಷ**-ತನ್ನ ಸಂಪರ್ಕದಿಂದ **ನಷ್ಟ** - ನಾಶಹೊಂದಿದ **ಭೇದ** - ತುಂಡುಗಳು **ಅಂಕಃ** - ತನ್ನ ಬಳಿಯಲ್ಲಿ ಉಳ್ಳ **ಸಃ**-ಆ ಕುಂಭಕರ್ಣ ದೇಹವು ಯುದ್ಧಕಾಲದಲ್ಲಿ **ಯೋಜನಾನಾಂ ಶತಂ** - ನೂರಾರು ಯೋಜನಗಳಷ್ಟು **ಉಚ್ಚಃ** - ಎತ್ತರವೂ **ತಾವತ್**-ಅಷ್ಟೇ **ವಿಸ್ತಾರವಾಂಶ್ಚ** - ದಪ್ಪವೂ ಆಗಿದ್ದರೂ **ಪಶ್ಚಾತ್** - ಅನಂತರ ಮರಣ ಕಾಲದಲ್ಲಿ **ಪ್ರಾಗಿವ**-ಹಿಂದಿನಂತೆ ಮೂರುಲಕ್ಷ ಯೋಜನ ಗಾತ್ರ ಉಳ್ಳದ್ದು **ಅಭೂತ್**-ಆಯಿತು ಆದರೂ **ತ್ವಯಾ**-ನಿನ್ನಿಂದ **ಸಃ**-ಆ ಶರೀರವು **ವ್ಯಗ್ರ ಬುದ್ಧ್ಯಾ**-ನಿರ್ಲಕ್ಷ್ಯಭಾವನೆಯಿಂದಲೆ **ಉಪಲ ಲವ ಇವ**-ಸಣ್ಣ ಕಲ್ಲಿನ ತುಂಡಿನಂತೆ **ಸಲೀಲಂ**-ಲೀಲಾಜಾಲವಾಗಿ **ಅತಃ** - ಲಂಕೆಯಿಂದ **ಕ್ಷಿಪ್ತಃ** - ಸಮುದ್ರಕ್ಕೆ ಎಸೆಯಲ್ಪಟ್ಟಿತು **ಕಪಿ** - ಕಪಿಗಳಿಂದ **ವರ** - ಸೇವಿಸಲ್ಪಡುವ **ವಪುಷಃ** - ಶರೀರವುಳ್ಳ **ತೇ** - ನಿನ್ನ **ಕೌಶಲಾಯ** - ಕೌಶಲ್ಯಕ್ಕೆ **ನಮಃ**-ನಮಸ್ಕಾರ

ಶ್ರೀರಾಮ, ಕುಂಭಕರ್ಣನು ಯುದ್ಧಕ್ಕೆ ಬಂದಾಗ ಕಪಿಗಳು ಅವನ ಮೇಲೆ ದೊಡ್ಡ ದೊಡ್ಡ ಬಂಡೆಗಲ್ಲುಗಳನ್ನೆಸೆದರು ಆ ಬಂಡೆಕಲ್ಲುಗಳ ಬಾಗಗಳೆಲ್ಲವೂ ತಮ್ಮ ತಮ್ಮ ಸ್ಥಾನದಲ್ಲಿ ಅತ್ಯಂತ ಸ್ಥಿರವಾಗಿದ್ದು ಎಷ್ಟು ಗಟ್ಟಿಯಾಗಿದ್ದರೂ ಅವು ಕುಂಬಕರ್ಣನ ಶರೀರಕ್ಕೆ ತಾಗಿದೊಡನೆ ಬಹಳ ಶಿಥಿಲವಾದ ಮಣ್ಣು ಹೆಂಟೆಗಳಂತೆ ಪುಡಿಪುಡಿಯಾಗಿ ಬಳಿಯಲ್ಲಿ ಬಿದ್ದುವು ಕಲ್ಲುಬಂಡೆ ಮಾತ್ರವಲ್ಲ ತುಂಡುಗಳೂ ಪುಡಿಪುಡಿಯಾಗಿ ಅದೃಶ್ಯವಾಗಬೇಕಾದರೆ ಅವನ ಶರೀರ ಎಷ್ಟು ಕಠಿಣವಾಗಿರಬಹುದು ! ಅಂಥ ಶರೀರ ಯುದ್ಧಕಾಲದಲ್ಲಿ ನೂರಾರು ಯೋಜನ ಎತ್ತರವೂ ಅಷ್ಟೇ ದಪ್ಪವೂ ಇದ್ದಿತು ಅದರೆ ಮರಣ ಕಾಲದಲ್ಲಿ ಮೂರು ಲಕ್ಷ ಯೋಜನಗಳಷ್ಟು ಎತ್ತರವೂ ದಪ್ಪವೂ ಆಯಿತು ಈ ಗಾತ್ರ ಅವನಿಗೆ ಸ್ವಾಭಾವಿಕವೆ ಆಗಿತ್ತು ಸಣ್ಣದಾದ ಲಂಕಾದ್ವೀಪದಲ್ಲಿ ವಾಸಮಾಡುವುದಕ್ಕಾಗಿ ಅವನು ತನ್ನ ಗಾತ್ರವನ್ನು ಕುಗ್ಗಿಸಿ ಕೊಂಡಿದ್ದನಷ್ಟೆ ಮರಣ ಕಾಲದಲ್ಲಿ ಸ್ವಾಭಾವಿಕವಾದ ಆ ಗಾತ್ರ ಹಿಂದಿನಂತೆ ತಿರುಗಿ ಬಂದರೂ ನೀನು ನಿನ್ನ ಬಾಣಗಳಿಂದ ಅವನನ್ನು ಕೊಂದು, ರಣರಂಗದಲ್ಲಿಯೆ ಬೀಳಿಸದೆ ಕೈ ಕಾಲು ಮುಂತಾದ ಅವಯವಗಳನ್ನು ಬೇರೆ ಬೇರೆಯಾಗಿ ತುಂಡರಿಸಿ,

ಪೂರ್ವಸಮುದ್ರದಲ್ಲಿ ಎರಡು ಕೈಗಳನ್ನೂ, ದಕ್ಷಿಣ ಸಮುದ್ರದಲ್ಲಿ ಎರಡು ಕಾಲುಗಳನ್ನೂ, ಪಶ್ಚಿಮ ಸಮುದ್ರದಲ್ಲಿ ತಲೆಯನ್ನೂ ಉತ್ತರ ಸಮುದ್ರದಲ್ಲಿ ಮುಂಡವನ್ನೂ ಬಾಣದಿಂದಲೆ ಲೀಲಾಜಾಲವಾಗಿ ಎಸೆದು ರಣರಂಗದಲ್ಲಿದ್ದ ಕಪಿಗಳನ್ನು ಕಾಪಾಡಿದೆ ನಿನ್ನ ಕೈಚಳಕವನ್ನು ಚೆನ್ನಾಗಿ ಲೋಕಕ್ಕೆ ತೋರಿಸಿಕೊಟ್ಟೆ ಈ ನಿನ್ನ ಕೌಶಲ ಕಲ್ಪನಾತೀತ ಸರ್ವಥಾ ಅವರ್ಣನೀಯ ಆದ್ದರಿಂದ ಅದಕ್ಕೆ ಕೇವಲ ನಮೋ ಎಂಬೆನು

'ಸ್ವಸ್ವಸ್ಥಾನಸ್ಥಿತಾತಿಸ್ಥಿರಶಕಲಾನಾಂ ಶಿಲಾಜಾಲಾನಾಂ ಸ್ವ ಸಂಶ್ಲೇಷೇಣ ನಷ್ಟಾಃ ಛೇದಾಃ ಸ್ವಸ್ಯ ಅಂಕೇ ಯಸ್ಯ ಸಃ ಕಂಭಕರ್ಣದೇಹಃ' ಎಂದು ವಿಗ್ರಹ

## ಹನುಮ, ನಿನ್ನ ಕೌಶಲ್ಯಕ್ಕೆ ನಮೋ !

**ಅತುಲ ಮತೇ**-ಅನುಪಮ ಬುದ್ಧಿವಂತನಾದ ಹನುಮಂತನೆ **ಪಶ್ಚಾತ್**-ಕಪಿ ಸೈನ್ಯವನ್ನು ಪುನರುಜ್ಜೀವನಗೊಳಿಸಿದ ಬಳಿಕ **ಯೋಜನಾನಾಂ ಶತಂ**- ನೂರು ಯೋಜನದಷ್ಟು **ಉಚ್ಚಃ** - ಎತ್ತರವೂ **ತಾವತ್** - ಅಷ್ಟೆ **ವಿಸ್ತಾರವಾಂಶ್ಚ**-ಅಗಲವೂ ಆಗಿದ್ದ **ಸಃ**-ಆ ಗಂಧಮಾದನ ಬೆಟ್ಟವು **ತ್ವಯಾ** ನಿನ್ನಿಂದ **ಅತಃ**-ಲಂಕೆಯಿಂದಲೆ **ವ್ಯಗ್ರಬುದ್ಧ್ಯಾ**-ನಿರ್ಲಕ್ಷ್ಯಭಾವದಿಂದ, ರಾಮನಲ್ಲಿ ನೆಟ್ಟ ಮನಸ್ಸಿನಿಂದ **ಸಲೀಲಂ** - ಲೀಲಾಜಾಲವಾಗಿ **ಉಪಲಲವ ಇವ** - ಸಣ್ಣ ಕಲ್ಲಿನ ತುಂಡಿನಂತೆ **ಕ್ಷಿಪ್ತೋಽಪಿ**-ಎಸೆಯಲ್ಪಟ್ಟರೂ **ಸ್ವಸ್ವಸ್ಥಾನಸ್ಥಿತ** - ತಮ ಸ್ಥಾನದಲ್ಲಿ ನಿಂತ **ಅತಿಸ್ಥಿರ**-ಅತ್ಯಂತ ಸ್ಥಿರವಾದ **ಶಕಲ**-ಭಾಗಗಳುಳ್ಳ **ಶಿಲಾ**-ಬಂಡೆಗಲ್ಲುಗಳ **ಜಾಲ**-ಸಮೂಹದ **ಸಂಶ್ಲೇಷ**-ಸಂಬಂಧದಿಂದ **ನಷ್ಟ** ಕಣ್ಮರೆಯಾದ **ಛೇದಾಂಕಃ** - ಕಿತ್ತ ಗುರುತುಳ್ಳದ್ದಾಗಿ **ಪ್ರಾಗಿವ** ಹಿಂದಿನಂತೆಯೆ **ಅಭೂತ್**-ಆಯಿತು **ಕಪಿವರ**-ಶ್ರೇಷ್ಠ ಕಪಿಯ **ವಪುಷಃ**-ಶರೀರ ಉಳ್ಳ **ತೇ**-ನಿನ್ನ **ಕೌಶಲಾಯ**-ಕೌಶಲ್ಯಕ್ಕೆ **ನಮಃ**-ನಮಸ್ಕಾರ

ಹನುಮ, ಮೃತಸಂಜೀವನಿ ಮುಂತಾದ ಔಷಧಗಳಿಂದ ಕಪಿಸೈನ್ಯವನ್ನು ಪುನರುಜ್ಜೀವನಗೊಳಿಸಿದ ಬಳಿಕ ನೂರು ಯೋಜನ ಎತ್ತರ ಮತ್ತು ಅಷ್ಟೆ ಅಗಲದ ಆ ಗಂಧಮಾದನ ಬೆಟ್ಟವನ್ನು ತಿರುಗಿ ಸ್ವಸ್ಥಾನದಲ್ಲಿ ಇಡ ಬೇಕಾಗಿತು ನೀನು ಈಗ ಹಿಂದಿನಂತೆ ಹಾರದೆ ಲಂಕೆಯಿಂದಲೆ ಆ ಬೆಟ್ಟವನ್ನು ಒಂದಕ್ಕೆ ಎಸೆದ

ಮಕ್ಕಳು ಸಣ್ಣ ಕಲ್ಲು ತುಂಡನ್ನು ಎಸೆಯುವಂತೆ ನಿರ್ಲಕ್ಷ್ಯಭಾವದಿಂದ, ಆದರೆ ರಾಮನಲ್ಲಿ ನೆಟ್ಟ ಮನಸ್ಸಿನಿಂದ , ಅನಾಯಾಸವಾಗಿಯೆ ನೀನು ಎಸೆದಿದ್ದರೂ ಅದು ತಾನು ಹಿಂದೆ ಇದ್ದ ಸ್ಥಾನದಲ್ಲಿಯೆ ಮೊದಲಿನಂತಯೆ ಕುಳಿತಿತು ಅದರ ಬಂಡೆಗಲ್ಲುಗಳೂ ಕಲ್ಲು ತುಂಡುಗಳೂ ತಮ್ಮ ತಮ್ಮ ಸ್ಥಳ ಬದಲಿಸದೆ ಹಿಂದಿನ ಸ್ಥಳದಲ್ಲಿಯೇ ನಿಂತವು ಬೆಟ್ಟವನ್ನು ಕಿತ್ತ ಗುರುತೇ ಕಾಣದಂತಾಯಿತು ಈ ಹಸ್ತಲಾಘವ ಯಾವ ವರ್ಣನೆಗೂ ನಿಲುಕದುದು ಆದ್ದರಿಂದ ಕೇವಲ ನಮೋ ಎನ್ನುವೆನು

-೨೦-

**ದೃಷ್ಟ್ವಾ ದುಷ್ಟಾಧಿಪೋರಃ**
**ಸ್ಫುಟಿತಕನಕಸದ್ವರ್ಮ ಘೃಷ್ಟಾಸ್ಥಿಕೂಟಂ**
**ನಿಷ್ಪಿಷ್ಟಂ ಹಾಟಕಾದ್ರಿ**
**ಪ್ರಕಟತಟತಟಾಕಾತಿಶಂಕೋ ಜನೋಽಭೂತ್ ।**
**ಯೇನಾಜೌ ರಾವಣಾರಿ**
**ಪ್ರಿಯನಟನಪಟುರ್ಮುಷ್ಟಿರಿಷ್ಟಂ ಪ್ರದೇಷ್ಟುಂ**
**ಕಿಂ ನೇಷ್ಟೇ ಮೇ ಸ ತೇಽಷ್ಟಾ -**
**ಪದಕಟಕತಟಿತ್ಕೋಟಿಭಾಮೃಷ್ಟಕಾಷ್ಠಃ ॥**

**ಶ್ರೀರಾಮ, ನಿನ್ನ ಮುಷ್ಟಿ ಎನಗೆ ಇಷ್ಟದಾಯಕವಾಗದೆ ?**

**ಯೇನ**-ಯಾವ ಮುಷ್ಟಿಯಿಂದ **ನಿಷ್ಪಿಷ್ಟಂ**-ಪುಡಿ ಮಾಡಲ್ಪಟ್ಟ **ಸ್ಫುಟಿತ**-ಒಡೆದು ಹೋದ **ಕನಕ ಸದ್ವರ್ಮ**-ಬಂಗಾರದ ಒಳ್ಳೆಯ ಕವಚ ಉಳ್ಳ **ಘೃಷ್ಟ**-ಪುಡಿಮಾಡಲ್ಪಟ್ಟ **ಅಸ್ಥಿ**-ಎಲುಬುಗಳ **ಕೂಟಂ**-ಸಮೂಹ ಉಳ್ಳ **ದುಷ್ಟಾಧಿಪ**-ದುಷ್ಟರಿಗೆ ನಾಯಕನಾದ ರಾವಣನ **ಉರಃ**-ಎದೆಯನ್ನು **ದೃಷ್ಟ್ವಾ**- ನೋಡಿ **ಜನಃ**-ಲೋಕವು **ಹಾಟಕಾದ್ರಿ**-ಸ್ವರ್ಣಮಯವಾದ ಮೇರುಪರ್ವತದ **ಪ್ರಕಟ**-ಪ್ರಕಾಶಮಾನವಾದ **ತಟ**-ತಪ್ಪಲಿನಲ್ಲಿರುವ **ತಟಾಕ**-ಕೆರೆ ಎಂದು **ಅತಿಶಂಕಃ**-ಬಲವಾದ ಭ್ರಾಂತಿಉಳ್ಳದು **ಅಭೂತ್**-ಆಯಿತೋ **ಆಜೌ**-ಯುದ್ಧದಲ್ಲಿ **ರಾವಣಾರಿ**-ರಾವಣನನ್ನು

ದ್ವೇಷಿಸುವ ದೇವತೆಗಳಿಗೆ **ಪ್ರಿಯ** - ಪ್ರಿಯವಾದುದನ್ನು **ನಟನ** - ಮಾಡುವುದರಲ್ಲಿ **ಪಟು**-ಸಮರ್ಥವಾದ **ಅಷ್ಟಾಪದ**-ಬಂಗಾರದ **ಕಟಕ**-ಕಡಗದ **ತಟಿತ್ ಕೋಟಿ**-ಕೋಟಿ ಮಿಂಚುಗಳಂದ **ಭಾ**-ಕಾಂತಿಯಿಂದ **ಆಮೃಷ್ಟ**-ವ್ಯಾಪ್ತವಾದ **ಕಾಷ್ಠಃ**- ದಿಕ್ಕುಗಳುಳ್ಳ **ತೇ**-ನಿನ್ನ **ಸಃ ಮುಷ್ಟಿಃ**-ಆ ಮುಷ್ಟಿಯು **ಮೇ**-ನನಗೆ **ಇಷ್ಟಂ**- ಅಭೀಷ್ಟವನ್ನು **ಪ್ರದೇಷ್ಟುಂ**-ಕೊಡಲು **ನೇಷ್ಟೇ ಕಿಂ**-ಸಮರ್ಥವಾಗದೇನು ?

ಶ್ರೀರಾಮ, ನೀನು ರಾವಣನೊಡನೆ ಯುದ್ಧಕ್ಕೆ ನಿಂತಾಗ ದೇವೇಂದ್ರನು ರಥವನ್ನೂ ಕವಚವನ್ನೂ ಕಳಿಸಿಕೊಟ್ಟ. ನೀನು ಕವಚಧಾರಣ ಮಾಡಿ ರಥವೇರಿ ಬಂದು ಚಿನ್ನದ ಕಡಗದಿಂದ ಅಲಂಕೃತವಾದ ನಿನ್ನ ದೃಢವಾದ ಮುಷ್ಟಿಯಿಂದ ಬಾಣ ಪ್ರಯೋಗ ಮಾಡಿ ರಾವಣನ ಎದೆ ಸೀಳಿ ಕೊಂದೆ ಆಗ ಪರ್ವತದ ತಪ್ಪಲಿನಂತೆ ವಿಶಾಲವಾಗಿದ್ದು ಚಿನ್ನದ ಕವಚದಿಂದ ಮುಚ್ಚಿದ್ದ ರಾವಣನ ಎದೆ ಸುವರ್ಣಮಯವಾದ ಮೇರುಪರ್ವತದಂತೆ ಹೊಳೆಯುತ್ತಿತ್ತು ನಿನ್ನ ಬಾಣದಿಂದ ಆ ಕವಚದೊಡನೆ ಒಳಗಿನ ಎಲುಬುಗಳೂ ಪುಡಿಯಾದವು ಎದೆ ಹಳ್ಳ ಬಿದ್ದು ರಕ್ತಮಯವಾಯಿತು ಲೋಕ ಅದನ್ನು ಕಂಡಾಗ ಮೇರು ಪರ್ವತದ ತಪ್ಪಲಿನಲ್ಲಿರುವ ಕಸ್ತೂರಿ ಕೊಳವಿದೆಂದು ಒಂದಾಗಿ ಭ್ರಾಂತಿಗೊಳಗಾಯಿತು ರಾವಣನ ಪೀಡೆಗೊಳಗಾಗಿ ಅವನನ್ನು ದ್ವೇಷಿಸುತ್ತಿದ್ದ ದೇವತೆಗಳಿಗೆ ಇದು ಪ್ರಿಯವಾಯಿತು ಹೀಗ ದೇವತೆಗಳ ಅಭೀಷ್ಟವನ್ನೂ ಪೂರೈಸಬಲ್ಲ ನಿನ್ನ ಮುಷ್ಟಿ ನನ್ನ ಅಭೀಷ್ಟ ಪೂರೈಸಲಾರದೇನು ?ಕೋಟಿ ಮಿಂಚಿನಂತೆ ಹೊಳೆವ ಚಿನ್ನದ ಕಡಗ ತೊಟ್ಟು ದಿಕ್ಕುಗಳನ್ನು ಬೆಳಗಿಸುವ ಆ ನಿನ್ನ ಮುಷ್ಟಿ ನನ್ನ ಅಭೀಷ್ಟವನ್ನು ಪೂರೈಸಲಿ

## ಹನುಮ, ನಿನ್ನ ಮುಷ್ಟಿ ಇಷ್ಟದಾಯಕವಾಗದೆ ?

**ಯೇನ**-ಯಾವ ಮುಷ್ಟಿಯಿಂದ **ನಿಷ್ಪಿಷ್ಟಂ**-ಪುಡಿ ಮಾಡಲ್ಪಟ್ಟ **ಸ್ಫಟಿತ**-ಒಡೆದು ಹೋದ **ಕನಕ ಸದ್ವರ್ಮ**-ಬಂಗಾರದ ಒಳ್ಳೆಯ ಕವಚವುಳ್ಳ **ಪಿಷ್ಟ**-ಪುಡಿ ಮಾಡಲ್ಪಟ್ಟ **ಅಸ್ಥಿ**-ಎಲುಬುಗಳ **ಕೂಟಂ**-ಸಮೂಹ ಉಳ್ಳ **ದುಷ್ಟಾಧಿಪ**- ದುಷ್ಟರಿಗೆ ನಾಯಕನಾದ ರಾವಣನ **ಉರಃ**-ಎದೆಯನ್ನು **ದೃಷ್ಟ್ವಾ**-ನೋಡಿ **ಜನಃ**-ಲೋಕವು **ಹಾಟಕಾದ್ರಿ**-ಸ್ವರ್ಣಮಯವಾದ

ಮೇರುಪರ್ವತದ **ಪ್ರಕಟ**-ಪ್ರಕಾಶಮಾನವಾದ **ತಟ**-ತಪ್ಪಲಿನಲ್ಲಿರುವ **ತಟಾಕ**-ಕೆರೆಯೆಂದು **ಅತಿಶಂಕಃ**-ಬಲವಾದ ಭ್ರಾಂತಿ ಉಳ್ಳದ್ದು **ಅಭೂತ್**-ಆಯಿತೋ **ಆಜೌ**-ಯುದ್ಧದಲ್ಲಿ **ರಾವಣಾರಿ**-ರಾವಣನ ಶತ್ರುವಾದ ರಾಮನಿಗೆ **ಪ್ರಿಯ**- ಪ್ರಿಯವಾದುದನ್ನು **ನಟನ**-ಮಾಡುವುದರಲ್ಲಿ **ಪಟುಃ**-ಸಮರ್ಥವಾದ **ಅಷ್ಟಾಪದ** - ಬಂಗಾರದ **ಕಟಕ** - ಕಡಗದ **ತಟಿತ್ ಕೋಟಿ** - ಕೋಟಿ ಮಿಂಚುಗಳಂಥ **ಭಾ** - ಕಾಂತಿಯಿಂದ **ಆಮೃಷ್ಟ** - ವ್ಯಾಪ್ತವಾದ **ಕಾಷ್ಠಃ**- ದಿಕ್ಕುಗಳುಳ್ಳ **ತೇ**-ನಿನ್ನ **ಸ ಮುಷ್ಟಿಃ**-ಆ ಮುಷ್ಟಿಯು **ಮೇ**-ನನಗೆ **ಇಷ್ಟಂ**- ಅಭೀಷ್ಟವನ್ನು **ಪ್ರದೇಷ್ಟುಂ**-ಕೊಡಲು **ನೇಷ್ಟೇ ಕಿಂ**-ಸಮರ್ಥವಾಗದೇನು ?

ಹನುಮ, ಯುದ್ಧದಲ್ಲಿ ಒಮ್ಮೆ ಮೂರ್ಛಿತನಾಗಿ ಬಿದ್ದ ಲಕ್ಷ್ಮಣನನ್ನು ರಾವಣನು ಎತ್ತಿಕೊಂಡು ಹೋಗಲು ಯತ್ನಿಸಿದ ಅದನ್ನು ಕಂಡು ನೀನು ಧಾವಿಸಿ ಅವನೆದೆಗೆ ಮುಷ್ಟಿಯಿಂದ ಒಮ್ಮೆ ಗುದ್ದಿದೆ ಅಷ್ಟರಿಂದಲೆ ಅವನು ಹತ್ತು ಬಾಯಿಗಳಿಂದಲೂ ರಕ್ತ ಕಾರಿಕೊಂಡ ಕಣ್ಣು ಕಿವಿಗಳಿಂದಲೂ ರಕ್ತ ಹೊರಚಿಮ್ಮಿತು ತಲೆ ತಿರುಗಿತು ಮೂರ್ಛೆಬಂದು ನಿಶ್ಚೇಷ್ಟನಾಗಿ ಕುಸಿದು ಬಿದ್ದುಬಿಟ್ಟ ಆಗ ತಾನು ಎಲ್ಲಿ ಇದ್ದೇನೆಂಬುದೆ ಅವನಿಗೆ ತಿಳಿಯದಾಯಿತು ಆಗ ಪರ್ವತದ ತಪ್ಪಲಿನಂತೆ ವಿಶಾಲವಾಗಿದ್ದು ಕವಚದಿಂದ ಮುಚ್ಚಿದ್ದ ಅವನ ಎದೆ ಸುವರ್ಣಮಯವಾದ ಮೇರುಪರ್ವತದಂತೆ ಹೊಳೆಯುತ್ತಿದ್ದುದರಿಂದ ಅದು ಹಳ್ಳ ಬಿದ್ದು ರಕ್ತಮಯವಾದಾಗ ಕೆನ್ನೀರ ಕೊಳ ಒಂದು ಮೇರು ಪರ್ವತದ ತಪ್ಪಲಿನಲ್ಲಿದ್ದಂತೆ ಲೋಕಕ್ಕೆ ಬಲವಾದ ಭ್ರಮೆ ಉಂಟಾಯಿತು ಹೀಗೆ ರಾವಣನ ಶತ್ರುವಾದ ರಾಮನಿಗೆ ಪ್ರಿಯವಾದ ಇಂಥ ವೀರಕಾರ್ಯ ಮಾಡುವುದರಲ್ಲಿ ನಿನ್ನ ಮುಷ್ಟಿ ಒಳ್ಳೆಯ ಸಮರ್ಥವಾಗಿದೆ ಕೋಟಿ ಮಿಂಚುಗಳಂತೆ ಹೊಳೆಯುವ ಚಿನ್ನದ ಕಡಗ ತೊಟ್ಟು ದಿಕ್ಕುಗಳನ್ನು ಬೆಳಗಿಸುವ ಆ ನಿನ್ನ ಮುಷ್ಟಿ ನನ್ನ ಅಭೀಷ್ಟಗಳನ್ನು ಪೂರೈಸಲಾರದೆ ?

-೨೧-

**ದೇವ್ಯಾದೇಶಪ್ರಣೀತಿ**
**ದ್ರುಹಿಣಹರವರಾವಧ್ಯರಕ್ಷೋವಿಘಾತಾ -**
**ದ್ಯಾಸೇವೋದ್ಯದ್ದಯಾರ್ದ್ರಃ**
**ಸಹಭುಜಮಕರೋದ್ರಾಮನಾಮಾ ಮುಕುಂದಃ ।**
**ದುಷ್ಪ್ರಾಪೇ ಪಾರಮೇಷ್ಠ್ಯೇ**
**ಕರತಲಮತುಲಂ ಮೂರ್ಧ್ನಿ ವಿನ್ಯಸ್ಯ ಧನ್ಯಂ**
**ತನ್ವನ್ ಭೂಯಃ ಪ್ರಭೂತ -**
**ಪ್ರಣಯವಿಕಸಿತಾಬ್ಜೇಕ್ಷಣಸ್ತ್ವೇಕ್ಷಮಾಣಃ ॥**

**ಶ್ರೀರಾಮ, ನೀನೊಲಿದರೆ ಅಲಭ್ಯವೇನಿದೆ ?**

**ದೇವ್ಯಾದೇಶ ಪ್ರಣೀತಿ**-ಸೀತಾಸಂದೇಶವನ್ನು ಒಯ್ಯುವುದೂ **ದ್ರುಹಿಣ ಹರವರ**-ಬ್ರಹ್ಮ ರುದ್ರರ ವರಗಳಿಂದ **ಅವಧ್ಯ**-ಅವಧ್ಯರಾದ **ರಕ್ಷಃ**-ರಾಕ್ಷಸರ **ವಿಘಾತ**-ವಧವೂ **ಆದಿ**-ಇವೇ ಮುಂತಾದ **ಆಸೇವಾ**-ಉತ್ತಮ ಸೇವೆಯಿಂದ **ಉದ್ಯದ್**-ಉದಿಸಿದ **ದಯಾ**-ಕೃಪೆಯಿಂದ **ಆರ್ದ್ರಃ**-ತೋಯ್ದ **ರಾಮನಾಮಾ**- ರಾಮನಾಮಕನಾದ **ಮುಕುಂದಃ**-ಮೋಕ್ಷದಾಯಕನಾದ **ಭವಾನ್**-ನೀನು **ಮೂರ್ಧ್ನಿ**-ಹನುಮಂತನ ತಲೆಯ ಮೇಲೆ **ಅತುಲಂ**-ಅನುಪಮವಾದ **ಕರತಲಂ**-ಅಂಗೈಯನ್ನು **ವಿನ್ಯಸ್ಯ**-ಇಟ್ಟು **ಧನ್ಯಂ**-ಧನ್ಯನನ್ನಾಗಿ **ತನ್ವನ್**- ಮಾಡುತ್ತ **ಭೂಯಃ**-ಮತ್ತೂ ಮತ್ತೂ **ಪ್ರಭೂತ**-ಒಹಳವಾದ **ಪ್ರಣಯ**-ವಾತ್ಸಲ್ಯದಿಂದ **ವಿಕಸಿತ** - ಅರಳಿದ **ಅಬ್ಜೇಕ್ಷಣಃ** - ತಾವರೆಗಣ್ಣುಳ್ಳವನಾಗಿ **ಆ** - ಚೆನ್ನಾಗಿ **ಈಕ್ಷಮಾಣಃ** ನೋಡುತ್ತ **ದುಷ್ಪ್ರಾಪೇ** - ದುರ್ಲಭವಾದ **ಪಾರಮೇಷ್ಠ್ಯೇ** ಬ್ರಹ್ಮಪದವಿಯಲ್ಲಿ **ಸಹಭುಜಂ ತು** - ಸಹಭೋಗ ಉಳ್ಳವನನ್ನಾಗಿಯೆ **ಅಕರೋತ್** - ಮಾಡಿರುವಿ

ಶ್ರೀರಾಮ, ಹನುಮಂತನು ನಿನ್ನ ಸಂದೇಶವನ್ನು ಸೀತಾದೇವಿಗೂ, ದೇವಿಯ ಸಂದೇಶವನ್ನು ನಿನಗೂ ಒಯ್ದು ಮುಟ್ಟಿಸಿದ ಬ್ರಹ್ಮ ರುದ್ರರ ವರಬಲದಿಂದ ಅವಧ್ಯರಾದ ರಾಕ್ಷಸರನ್ನೂ ಕೊಂದ ಇಂಥ ಅನೇಕ ಉತ್ತಮ

ಸೇವೆಗಳನ್ನು ಮಾಡಿದ ಹನುಮಂತನಲ್ಲಿ ನಿನಗೆ ಕೃಪೆ ಉಂಟಾಯಿತು ದಯಾರ್ದ್ರನಾದ ನೀನು ಅವನ ತಲೆಯ ಮೇಲೆ ಅನುಪಮವಾದ ಕರತಲವನ್ನಿಟ್ಟು ಧನ್ಯನನ್ನಾಗಿ ಮಾಡಿದೆ ಮತ್ತೂ ಮತ್ತೂ ವಾತ್ಸಲ್ಯದಿಂದ ಅರಳಿದ ತಾವರೆಗಣ್ಣಿನಿಂದ ಅವನನ್ನು ನೋಡುತ್ತ ಮುಂದಿನ ಕಲ್ಪದಲ್ಲಿ ಬ್ರಹ್ಮಪದವಿಯಲ್ಲಿ ನಿನಗೆ ಸಹಭೋಗ ನೀಡುವೆನೆಂದು ವರವನ್ನೂ ಕೊಟ್ಟೆ ನೀನೊಲಿದರೆ ಅಲಭ್ಯವೆಂಬುದು ಏನಿದೆ?

**ಹನುಮ, ನೀನೆ ಧನ್ಯ**

**ದೇವ್ಯಾದೇಶಪ್ರಣೀತಿ**-ಸೀತಾಸಂದೇಶವನ್ನೊಯ್ಯುವುದೂ **ದ್ರುಹಿಣ ಹರವರ**-ಬ್ರಹ್ಮರುದ್ರರ ವರಗಳಿಂದ **ಅವಧ್ಯ**-ಅವಧ್ಯರಾದ **ರಕ್ಷಃ**-ರಾಕ್ಷಸರ **ವಿಘಾತ**-ವಧವೂ **ಆದಿ**-ಇವೇ ಮುಂತಾದ **ಆಸೇವಾ**-ಉತ್ತಮ ಸೇವೆಯಿಂದ **ಉದ್ಯತ್**-ಉದಿಸಿದ **ದಯಾ**-ಕೃಪೆಯಿಂದ **ಆರ್ದ್ರಃ**-ತೋಯ್ದ **ರಾಮನಾಮಾ** - ರಾಮನಾಮಕನಾದ **ಮುಕುಂದಃ**-ಶ್ರೀಹರಿಯು **ಮೂರ್ಧ್ನಿ**-ನಿನ್ನ ತಲೆಯ ಮೇಲೆ **ಅತುಲಂ**-ಅನುಪಮವಾದ **ಕರತಲಂ** - ಅಂಗೈಯನ್ನು **ವಿನ್ಯಸ್ಯ** - ಇಟ್ಟು **ಧನ್ಯಂ** - ಧನ್ಯನನ್ನಾಗಿ **ತನ್ವನ್**-ಮಾಡುತ್ತ **ಭೂಯಃ**-ಮತ್ತೂ ಮತ್ತೂ **ಪ್ರಭೂತ** - ಬಹಳವಾದ **ಪ್ರಣಯ** - ವಾತ್ಸಲ್ಯದಿಂದ **ವಿಕಸಿತ** - ಅರಳಿದ **ಅಬ್ಜೇಕ್ಷಣಃ** - ತಾವರೆಗಣ್ಣುಗಳುಳ್ಳವನಾಗಿ **ತ್ವಾ** - ನಿನ್ನನ್ನು **ಈಕ್ಷಮಾಣಃ** - ನೋಡುತ್ತ **ದುಷ್ಪ್ರಾಪೇ** - ದುರ್ಲಭವಾದ **ಪಾರಮೇಷ್ಠ್ಯೇ**-ಬ್ರಹ್ಮ ಪದವಿಯಲ್ಲಿ **ಸಹಭುಜಂ** - ಸಹಭೋಗ ಉಳ್ಳವನಾಗಿ **ಅಕರೋತ್** - ಮಾಡಿರುವನು

ಹನುಮ ನೀನೆ ಧನ್ಯ ಏಕೆಂದರೆ ನೀನು ರಾಮನ ಸಂದೇಶವನ್ನು ಸೀತಾದೇವಿಗೂ ದೇವಿಯ ಸಂದೇಶವನ್ನು ರಾಮನಿಗೂ ಒಯ್ದು ಮುಟ್ಟಿಸಿದಿ ಬ್ರಹ್ಮರುದ್ರರ ವರಬಲದಿಂದ ಅವಧ್ಯರಾದ ರಾಕ್ಷಸರನ್ನು ಕೊಂದಿ ಇಂಥ ಅನೇಕ ಉತ್ತಮ ಸೇವೆಗಳನ್ನು ಮಾಡಿದ ನಿನ್ನಲ್ಲಿ ರಾಮನಿಗೆ ಕೃಪೆ ಉಂಟಾಯಿತು ದಯಾರ್ದ್ರನಾದ ಅವನು ನಿನ್ನ ತಲೆಯ ಮೇಲೆ ಅನುಪಮವಾದ ಕರತಲವನ್ನಿಟ್ಟು ಧನ್ಯನಾಗಿ ಮಾಡಿದ ಮತ್ತೂ ಮತ್ತು ವಾತ್ಸಲ್ಯದಿಂದ ಅರಳಿದ

ತಾವರೆಗಣ್ಣಿನ ನಿನ್ನನ್ನು ನೋಡುತ್ತ ಮುಂದಿನ ಕಲ್ಪದಲ್ಲಿ ಬ್ರಹ್ಮಪದವಿಯಲ್ಲಿ ನಿನಗೆ ಸಹಭೋಗ ನೀಡುವೆನೆಂದು ವರವನ್ನೂ ಕೊಟ್ಟೆ ।

**-೨೨-**

**ಜಘ್ನೇ ನಿಘ್ನೇನ ವಿಘ್ನೋ**
**ಬಹುಲಬಲಬಕಧ್ವಂಸನಾದ್ ಯೇನ ಶೋಚದ್-**
**ವಿಪ್ರಾನುಕ್ರೋಶಪಾಶೈಃ**
**ಅಸುವಿಧೃತಿಸುಖಸ್ಯೈಕಚಕ್ರಾಜನಾನಾಂ ।**
**ತಸ್ಮೈ ತೇ ದೇವ ಕುರ್ಮಃ**
**ಕುರುಕುಲಪತಯೇ ಕರ್ಮಣಾ ಚ ಪ್ರಣಾಮಾನ್**
**ಕಿರ್ಮೀರಂ ದುರ್ಮತೀನಾಂ**
**ಪ್ರಥಮಮಥ ಚ ಯೋ ನರ್ಮಣಾ ನಿರ್ಮಮಾಥ ॥**

**ಶ್ರೀಕೃಷ್ಣ, ನೀನು ಬಕಾಸುರನನ್ನು ಕೊಂದೆ, ಕಂಸನನ್ನೂ ಮಡುಹಿದೆ**

**ದೇವ**-ದೇವನೆ **ಶೋಚತ್**-ದುಃಖಿಸುವ **ವಿಪ್ರ**-ಬ್ರಾಹ್ಮಣರಲ್ಲಿರುವ **ಅನುಕ್ರೋಶ**-ದಯೆಯೆಂಬ **ಪಾಶೈಃ**-ಹಗ್ಗಗಳಿಂದ **ನಿಘ್ನೇನ** - ಪರವಶನಾದ **ಯೇನ**-ಯಾರಿಂದ **ಬಹುಲಬಲ**-ಮಹಾ ಬಲಶಾಲಿಯಾದ **ಬಕ**-ಬಕಾಸುರನ **ಧ್ವಂಸನಾತ್**-ವಧೆಯಿಂದ **ಏಕಚಕ್ರಾ**-ನಿನ್ನೊಬ್ಬನ ಏಕಚಕ್ರಾಧಿಪತ್ಯ ಉಳ್ಳ ಭೂಮಂಡಲದ **ಜನಾನಾಂ**-ಜನರ **ಅಸುವಿಧೃತಿ**-ಪ್ರಾಣಧಾರಣೆಯ **ಸುಖಸ್ಯ**-ಸುಖಕ್ಕೆ ಇದ್ದ **ವಿಘ್ನಃ**-ತೊಂದರೆಯು **ಜಘ್ನೇ**-ಪರಿಹೃತವಾಯಿತೋ **ಅಥ**-ಅನಂತರ **ಯಃ**-ಯಾರು **ದುರ್ಮತೀನಾಂ**-ದುರ್ಬುದ್ಧಿಯವರಿಗೆಲ್ಲ **ಪ್ರಥಮಂ**-ಮೊದಲಿಗನಾದ **ಕಿರ್ಮೀರಂ**-ಸದ್ಗುಣ ದುರ್ಗುಣಗಳಿಂದ ಮಿಶ್ರವಾದ ವ್ಯಕ್ತಿತ್ವವುಳ್ಳ ಕಂಸನನ್ನು **ನರ್ಮಣಾ**-ಅನಾಯಾಸದಿಂದ **ನಿರ್ಮಮಾಥ** - ನಾಶಮಾಡಿದನೋ **ಕುರುಕುಲಪತಯೇ** - ಕುರುಕು ಸಂರಕ್ಷಕನಾದ **ತಸ್ಮೈ** - ಅಂಥ **ತೇ** - ನಿನಗೆ **ಕರ್ಮಣಾ ಚ** - ಮನಸ್ಸು ಮಾತುಗಳಿಂದ ಮಾತ್ರವಲ್ಲದೆ ಕಾಯಿಕವಾಗಿಯೂ **ಪ್ರಣಾಮಾನ್** ನಮಸ್ಕಾರಗಳನ್ನು **ಕುರ್ಮಃ**-ಮಾಡುತ್ತೇವೆ

ಕೃಷ್ಣ ಪೂತನೆಯ ಸೋದರನೂ ಕಂಸನ ಭೃತ್ಯನೂ ಆದ ಬಕಾಸುರನು ಷಣ್ಮುಖನ ವರಬಲದಿಂದ ಅವಧ್ಯನಾಗಿದ್ದ. ಕೊಕ್ಕರೆಯ ರೂಪದಿಂದ ಬಂದು ನಿನ್ನ ಬಾಲಗೋಪಾಲ ರೂಪವನ್ನು ನುಂಗಲು ಯತ್ನಿಸಿದಾಗ ನೀನು ಅವನ ಕೊಕ್ಕನ್ನು ಇಬ್ಭಾಗ ಮಾಡಿ ಸೀಳಿ ಕೊಂದ. ಕಂಸಾವೇಶದಂತೆ ಬ್ರಾಹ್ಮಣರನ್ನು ಪೀಡಿಸುತ್ತಿದ್ದ ಇಂಥ ಅನೇಕ ದೈತ್ಯರನ್ನು ಕೊಂದು ಬ್ರಾಹ್ಮಣರಿಗೆ ಮಾತ್ರವಲ್ಲದೆ ನಿನ್ನ ಸಾರ್ವಭೌಮ ಏಕಚಕ್ರಾಧಿಪತ್ಯಕ್ಕೊಳಗಾಗಿರುವ ಸಮಸ್ತ ಭೂಮಂಡಲದ ಸಜ್ಜನರಿಗೂ ಅವರ ಪ್ರಾಣಧಾರಣೆಯ ಸುಖಕ್ಕೆ ಇದ್ದ ಅಡಚಣೆಯನ್ನು ನಿವಾರಿಸಿದಿ. ಅವರನ್ನು ನೆಮ್ಮದಿಯಿಂದ ಬಾಳುವಂತೆ ಮಾಡಿದಿ. ಮುಂದೆ ನೀನು ಕಂಸನನ್ನೂ ಅನಾಯಾಸವಾಗಿ ಕೊಂದೆ. ದುರ್ಬುದ್ಧಿಯ ಜನರಿಗೆಲ್ಲ ಅವನೆ ಮೊದಲಿಗನಾಗಿದ್ದ. ಅವನದು ಸದ್ಗುಣ ದುರ್ಗುಣಗಳೆರಡೂ ಸೇರಿದ ಮಿಶ್ರ ವ್ಯಕ್ತಿತ್ವ. ಏಕೆಂದರೆ ಅವನಲ್ಲಿ ಕಾಲನೇಮಿ ಎಂಬ ಅಸುರನೂ ಭೃಗುಮುನಿಯೂ ಒಂದೇ ಶರೀರದಲ್ಲಿದ್ದರು. ಕಾಲನೇಮಿಯು ಸ್ವರೂಪದಿಂದ ದುರ್ಗುಣಮೂರ್ತಿ, ಕಪ್ಪು ಬಣ್ಣದವ. ಭೃಗು ಸದ್ಗುಣಮೂರ್ತಿ, ಬಿಳಿ ಬಣ್ಣದವ. ಈ ಕಪ್ಪು ಬಿಳುಪಿನ ಮಿಶ್ರಣ ಕಂಸನಲ್ಲಿತ್ತು. ಅಂಥ ಕಂಸನನ್ನು ಕೊಂದ ನೀನು ಮುಂದೆ ತಾಯ ಗರ್ಭದಲ್ಲಿ ಪರೀಕ್ಷಿತನನ್ನು ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದ ಕಾಪಾಡಿ ಕುರುಕುಲವನ್ನು ಮುಂದುವರಿಯುವಂತೆ ಮಾಡಿ ಕಾಪಾಡಿದಿ. ಇಂಥ ನಿನಗೆ ಮನಸು ಮಾತುಗಳಿಂದ ಮಾತ್ರವಲ್ಲದೆ ಶರೀರದಿಂದಲೂ ನಮಸ್ಕಾರ ಮಾಡುವೆವು.

**ಭೀಮ, ನೀನು ಬಕಾಸುರನನ್ನೂ ಕಿರ್ಮೀರನನ್ನೂ ಕೊಂದೆ.**

**ದೇವ** - ವಾಯುದೇವನೆ, **ಶೋಚತ್** - ದುಃಖಿಸುವ **ವಿಪ್ರ** - ಬ್ರಾಹ್ಮಣನಲ್ಲಿರುವ **ಅನುಕ್ರೋಶ** - ದಯೆ ಎಂಬ **ಪಾಶೈಃ** - ಹಗ್ಗಗಳಿಂದ **ನಿಘ್ನೇನ** - ಪರವಶನಾದ **ಯೇನ** - ಯಾರಿಂದ **ಬಹುಲಬಲ** - ಬಹಳ ಬಲಶಾಲಿಯಾದ **ಬಕ** - ಬಕಾಸುರನ **ಧ್ವಂಸನಾತ್** - ವಧೆಯಿಂದ **ಏಕಚಕ್ರಾ** - ಏಕಚಕ್ರಾ ನಗರದ **ಜನಾನಾಂ** - ಜನರ **ಅಸುವಿಧೃತಿ** - ಪ್ರಾಣಧಾರಣೆಯ **ಸುಖಸ್ಯ**-ಸುಖಕ್ಕೆ ಇದ್ದ **ವಿಘ್ನಃ**-ತೊಂದರೆಯು **ಜಘ್ನೇ**-ಪರಿಹೃತವಾಯಿತೋ **ಅಥ**-ಅನಂತರ **ಯಃ**-ಯಾರು **ದುರ್ಮತೀನಾಂ**-ದುರ್ಬುದ್ಧಿಯವರಿಗೆಲ್ಲ **ಪ್ರಥಮಂ**- ಮೊದಲಿಗನಾದ **ಕಿರ್ಮೀರಂ** - ಕಿರ್ಮೀರ ರಾಕ್ಷಸನನ್ನು

**ನರ್ಮಣಾ** - ಅನಾಯಾಸದಿಂದ **ನಿರ್ಮಮಾಥ** - ನಾಶಮಾಡಿದನೋ **ಕುರುಕುಲಪತಯೇ** - ಕುರುಕುಲಕ್ಕೆ ಅಧಿಪತಿಯಾದ **ತಸ್ಮೈ** - ಅಂಥ **ತೇ**-ನಿನಗೆ **ಕರ್ಮಣಾ ಚ** ಮನಸ್ಸು ಮಾತುಗಳಿಂದ ಮಾತ್ರವಲ್ಲದ ಕಾಯಿಕವಾಗಿಯೂ **ಪ್ರಣಾಮಾನ್** - ನಮಸ್ಕಾರಗಳನ್ನು **ಕುರ್ಮಃ** - ಮಾಡುತ್ತೇವೆ

ಭೀಮ, ಏಕಚಕ್ರಾನಗರದಲ್ಲಿ ಹದಿಮೂರು ವರ್ಷಗಳಿಗೊಮ್ಮೆ ಸರದಿಯಂತೆ ಒಂದು ಮನೆಯವರು ಒಂದು ಬಂಡಿ ಅನ್ನ, ಎರಡು ಎತ್ತುಗಳು, ಒಂಡಿ ಹೊಡೆಯುವ ಒಬ್ಬ ಆಳು ಇವಿಷ್ಟನ್ನು ಬಕಾಸುರನಿಗೆ ಕಪ್ಪ ಕೊಡಬೇಕಾಗಿತ್ತು. ಹೀಗೆ ಆ ನಗರದ ಜನರಿಗೆ ಪ್ರಾಣಧಾರಣೆಯ ಸುಖಕ್ಕೆ ಅಡ್ಡಿಯಾಗಿದ್ದ ಬಕಾಸುರನನ್ನು ಕೊಂದೆ. ಏಕೆಂದರೆ ನೀವು ಅರಗಿನ ಮನೆಯಿಂದ ತಪ್ಪಿಸಿಕೊಂಡು ಬಂದು ಬ್ರಾಹ್ಮಣ ವೇಷದಿಂದ ಏಕಚಕ್ರಾ ನಗರದ ಒಬ್ಬ ಬ್ರಾಹ್ಮಣನ ಮನೆಯಲ್ಲಿ ವಾಸಮಾಡುತ್ತಿದ್ದಾಗ ಒಂದು ದಿನ ಬಕಾಸುರನಿಗೆ ಬಂಡಿ ಅನ್ನ ಕೊಡುವ ಸರದಿ ಆ ಬ್ರಾಹ್ಮಣನಿಗೇ ಒಂದಿತ್ತು. ಅವನ ಮೇಲಿನ ದಯೆಯಿಂದ ನೀನ ಬಂಡಿ ಹೊಡೆದು ಬಕನ ಬಳಿಗೆ ಹೋಗಿ ಅವನನ್ನು ಕೊಂದ ಅನಂತರ ವನವಾಸಕಾಲದಲ್ಲಿ ಕಾಮ್ಯಕ ವನದಲ್ಲಿ ಇದಿರಾದ, ಬಕಾಸುರನ ತಮ್ಮನಾದ, ಕಿರ್ಮೀರನನ್ನೂ ಅನಾಯಾಸವಾಗಿ ಕೊಂದೆ ಕೌರವರನ್ನು ಕೊಂದು ಕುರುಕುಲಕ್ಕ ಅಧಿಪತಿಯಾದೆ ಅಂಥ ನಿನಗೆ ಮನಸ್ಸುಮಾತುಗಳಿಂದಲೂ ಶರೀರದಿಂದಲೂ ನಮಸ್ಕಾರಮಾಡುವೆವು

-೨೩-

**ನಿರ್ಮೃದ್ನನ್ನತ್ಯಯತ್ನಂ**
**ವಿಜರವರ ಜರಾಸಂಧಕಾಯಾಸ್ಥಿಸಂಧೀನ್**
**ಯುದ್ಧೇ ತ್ವಂ ಸ್ವಧ್ವರೇ ವಾ**
**ಪಶುಮಿವ ದಮಯನ್ ವಿಷ್ಣುಪಕ್ಷದ್ವಿಡೀಶಂ ।**
**ಯಾವತ್ ಪ್ರತ್ಯಕ್ಷಭೂತಂ**
**ನಿಖಿಲಮಖಭುಜಂ ತರ್ಪಯಾಮಾಸಿಥಾಸೌ**

**ತಾವತ್ಯಾಯೋಜಿ ತೃಪ್ತ್ಯಾ**
**ಕಿಮು ವದ ಭಗವನ್ ರಾಜಸೂಯಾಶ್ವಮೇಧೇ ॥**

## ಶ್ರೀಕೃಷ್ಣ, ನೀನು ಜರಾಸಂಧನ ಸೈನ್ಯವನ್ನೆಲ್ಲ ಮುರಿದೆ !

**ವಿಜರವರ**-ದೇವೋತ್ತಮನಾದ **ಭಗವನ್**-ಭಗವಂತನೆ, **ತ್ವಂ**-ನೀನು **ಜರಾಸಂಧ**-ಜರಾಸಂಧನ **ಕಾಯ**-ಶರೀರದ **ಅಸ್ಥಿಸಂಧೀನ್**-ಅಸ್ಥಿ ಸಂಧಿಗಳನ್ನು **ಅತ್ಯಯತ್ನಂ ನಿರ್ಮೃದ್ನನ್**- ಮುಂದೆ ಭೀಮನ ಕೈಯಿಂದ ಅನಾಯಾಸವಾಗಿ ಪುಡಿ ಮಾಡಲಿರುವವನಾಗಿ, ಮೊದಲಿಗೆ, **ವಿಷ್ಣುಪಕ್ಷದ್ವಿಟ್**-ವಿಷ್ಣುಪಕ್ಷದ ದ್ವೇಷಿಯಾದ ಜರಾಸಂಧನೆ **ಈಶಂ**-ಸ್ವಾಮಿಯಾಗಿ ಉಳ್ಳ ಸೈನ್ಯವನ್ನು **ಸ್ವಧ್ವರೇ ವಾ**-ಒಳ್ಳೆಯ ಯಜ್ಞದಂತಿರುವ **ಯುದ್ಧೇ**-ಯುದ್ಧದಲ್ಲಿ **ಪಶುಮಿವ**-ಪಶುವಿನಂತೆ **ದಮಯನ್**-ವಧಿಸುತ್ತ **ಪ್ರತ್ಯಕ್ಷ ಭೂತಂ**-ಪ್ರತ್ಯಕ್ಷವಾಗಿ ಬಂದು ನಿಂತ **ನಿಖಿಲ**-ಎಲ್ಲ **ಮಖಭುಜಂ**-ಯಜ್ಞ ಭೋಕ್ತರಾವ ದೇವತೆಗಳ ಸಮೂಹವನ್ನು **ಯಾವತ್**-ಎಷ್ಟು **ತರ್ಪಯಾಮಾಸಿಥ**-ಸಂತೋಷಪಡಿಸಿದೆಯೋ **ತಾವತ್ಯಾ**-ಅಷ್ಟು **ತೃಪ್ತ್ಯಾ** - ಸಂತೋಷದಿಂದ **ಅಸೌ**-ಈ ದೇವತೆಗಳ ಸಮೂಹವು **ರಾಜಸೂಯಾಶ್ವಮೇಧೇ**-ಚಕ್ರವರ್ತಿಗಳು ಕಾಲಕಾಲಕ್ಕೆ ಮಾಡುವ ರಾಜಸೂಯ ಅಶ್ವಮೇಧಗಳಲ್ಲಿ **ಆಯೋಜಿ** **ಕಿಮು**-ಯುಕ್ತಗೊಳಿಸಲ್ಪಟ್ಟಿತೇನು ? **ವದ**-ಹೇಳು

ಶ್ರೀಕೃಷ್ಣ, ನೀನು ಜರಾಸಂಧನ ಶರೀರದ ಅಸ್ಥಿಸಂಧಿಗಳನ್ನು ಮುರಿದು ಅವನನ್ನು ವಧಿಸುವ ಕಾರ್ಯವನ್ನು ಮುಂದೆ ಪಾಂಡವರ ರಾಜಸೂಯ ಯಾಗದ ಸಂದರ್ಭದಲ್ಲಿ ಭೀಮಸೇನನಿಂದ ಅನಾಯಾಸವಾಗಿ ಮಾಡಿಸಬೇಕೆಂದು ಅವನಿಗೇ ಅದನ್ನು ಮೀಸಲಾಗಿರಿಸಿ ಜರಾಸಂಧನ ಸೈನ್ಯವನ್ನು ಮಾತ್ರ ಹದಿನೆಂಟು ಬಾರಿ ನಿಃಶೇಷವಾಗಿ ನಾಶಗೊಳಿಸಿದಿ ಯಜ್ಞದಲ್ಲಿ ಪಶುವನ್ನು ವಧಿಸುವಂತೆ ಯುದ್ಧದಲ್ಲಿ ಆ ದುಷ್ಟ ಸೈನ್ಯವನ್ನು ನಾಶಪಡಿಸಿದಿ ಆಗ ಪ್ರತ್ಯಕ್ಷವಾಗಿ ವಿಮಾನಗಳಲ್ಲಿ ಬಂದು ನಿಂತು ನೋಡಿ ಆನಂದಿಸಿದವರು, ಯಜ್ಞಭೋಕ್ತರಾದ ಎಲ್ಲ ದೇವತೆಗಳು ಅವರಿಗೆ ಆಗ ಅದಷ್ಟು ತೃಪ್ತಿ ರಾಜರುಗಳು ಮಾಡುತ್ತಿದ್ದ

ರಾಜಸೂಯ ಅಶ್ವಮೇಧಯಜ್ಞಗಳಲ್ಲಿ ಯಾವುದರಲ್ಲಿಯೂ ಎಂದೂ ಆಗಿರಲಿಲ್ಲ ಆಗಿತ್ತೇನು ?ಹೇಳು

### ಭೀಮಸೇನ, ನೀನು ಜರಾಸಂಧನನ್ನು ಸಂಹರಿಸಿದೆ !

**ವಿಜರವರ** - ದೇವೋತ್ತಮನೂ **ಭಗವನ್** ಷಡ್ಗುಣೈಶ್ವರ್ಯಶಾಲಿಯೂ ಆದ ಭೀಮಸೇನನೆ, **ತ್ವಂ**-ನೀನು **ಜರಾಸಂಧ**-ಜರಾಸಂಧನ **ಕಾಯ**-ಶರೀರದ **ಅಸ್ಥಿಸಂಧೀನ್**-ಅಸ್ಥಿಸಂಧಿಗಳನ್ನು **ಅತ್ಯಯತ್ನಂ**-ನಿರಾಯಾಸವಾಗಿ **ನಿರ್ಮೃಗ್ನನ್**- ಮುರಿಯುತ್ತ, **ಸ್ವಧ್ವರೇ ವಾ** - ಒಳ್ಳೆಯ ಯಜ್ಞದಂತಿರುವ **ಯುದ್ಧೇ** - ಯುದ್ಧದಲ್ಲಿ **ವಿಷ್ಣುಪಕ್ಷದ್ವಿಟ್** - ವಿಷ್ಣುಪಕ್ಷ ದ್ವೇಷಿಗಳಿಗೆ **ಈಶಂ** - ಸ್ವಾಮಿಯಾದ ಆ ಜರಾಸಂಧನನ್ನು **ಪಶುಮಿವ** - ಪಶುವಿನಂತೆ **ದಮಯನ್** - ವಧಿಸುತ್ತ **ಪ್ರತ್ಯಕ್ಷಭೂತಂ** - ಪ್ರತ್ಯಕ್ಷವಾಗಿ ನಿಂತ **ನಿಖಿಲಮಖ** - ಎಲ್ಲ ಯಜ್ಞಗಳ **ಭುಜಂ** - ಭೋಕ್ತನಾದ ಕೃಷ್ಣನನ್ನು **ಯಾವತ್**-ಎಷ್ಟು **ತರ್ಪಯಾಮಾಸಿಥ** - ತೃಪ್ತಿಪಡಿಸಿದೆಯೋ **ತಾವತಾ** - ಅಷ್ಟು **ತೃಪ್ತ್ಯಾ** - ತೃಪ್ತಿಯಿಂದ **ಅಸೌ** ಈ ಕೃಷ್ಣನು **ರಾಜಸೂಯಾಶ್ವಮೇಧೇ**-ರಾಜಸೂಯ ಅಶ್ವಮೇಧ ಯಾಗಗಳಲ್ಲಿ **ಅಯೋಜಿ ಕಿಮು** - ಯುಕ್ತಗೊಳಿಸಲ್ಪಟ್ಟನೇನು **ವದ**-ಹೇಳು

ಭೀಮಸೇನ, ನೀನು ಜರಾಸಂಧನ ಅಸ್ಥಿ ಸಂಧಿಗಳನ್ನು ಅನಾಯಾಸವಾಗಿ ಮುರಿದು, ವಿಷ್ಣುಪಕ್ಷ ದ್ವೇಷಿಗಳಲ್ಲಿ ಅಗ್ರಗಣ್ಯನಾದ ಅವನನ್ನು ಯುದ್ಧ ಯಜ್ಞದಲ್ಲಿ ಪಶುವಿನಂತ ಕೊಂದು, ಪ್ರತ್ಯಕ್ಷ ನಿಂತಿದ್ದ ಸರ್ವಯಜ್ಞ ಭೋಕ್ತನಾದ ಕೃಷ್ಣನಿಗೆ ಎಷ್ಟು ತೃಪ್ತಿ ನೀಡಿದೆಯೋ ಅಷ್ಟು ತೃಪ್ತಿ ಮುಂದೆ ಪಾಂಡವರು ಮಾಡಿದ ರಾಜಸೂಯ ಅಶ್ವಮೇಧಯಾಗಗಳಿಂದಲಾದರೂ ಆಯಿತೇನು ?ಹೇಳು ವಿಷ್ಣು ವೈಷ್ಣವ ದ್ವೇಷಿಗಳ ದಮನ ಮಾಡುವುದೆ ಕ್ಷತ್ರಿಯರಿಗೆ ಪರಮಧರ್ಮ, ಯಾಗಕ್ಕಿಂತಲೂ ಹೆಚ್ಚು ಭಗವಂತನಿಗೆ ಪ್ರೀತಿಕರ

-೨೪-

**ಕ್ಷ್ವೇಲಾಕ್ಷೀಣಾಟ್ಟಹಾಸಂ**
**ತವ ರಣಮರಿಹನ್ನುದ್ಗದೋದ್ದಾಮಬಾಹೋ**

**ಬಹ್ವಕ್ಷೌಹಿಣ್ಯನೀಕ**
**ಕ್ಷಪಣಸುನಿಪುಣಂ ಯಸ್ಯ ಸರ್ವೋತ್ತಮಸ್ಯ ।**
**ಶುಶ್ರೂಷಾರ್ಥಂ ಚಕರ್ಥ**
**ಸ್ವಯಮಯಮಿಹ ಸಂವಕ್ತುಮಾನಂದತೀರ್ಥ**
**ಶ್ರೀಮನ್ನಾಮನ್ ಸಮರ್ಥಃ**
**ತ್ವಮಪಿ ಹಿ ಯುವಯೋಃ ಪಾದಪದ್ಮಂ ಪ್ರಪದ್ಯೇ ॥**

**ಶ್ರೀಕೃಷ್ಣ, ನಿನ್ನ ಯುದ್ಧಕೌಶಲ ಅವರ್ಣನೀಯ !**

**ಅರಿಹನ್**-ಶತ್ರು ಸಂಹಾರಕನಾದ **ಉದ್ಗದ**-ಉತ್ಕೃಷ್ಟವಾದ ಗದೆಯುಳ್ಳ **ಉದ್ದಾಮ**-ಉಚ್ಛ್ರಂಖಲವಾದ **ಬಾಹೋಃ**-ಬಾಹು ಉಳ್ಳ ಕೃಷ್ಣನೆ **ಕ್ಷ್ವೇಲಾ**-ಸಿಂಹನಾದದಿಂದ **ಅಕ್ಷೀಣ**-ಕ್ಷೀಣಿಸದಿರುವ **ಅಟ್ಟಹಾಸಂ** - ಅಟ್ಟಹಾಸವುಳ್ಳ **ಬಹ್ವಕ್ಷೌಹಿಣೀ**-ಬಹು ಅಕ್ಷೌಹಿಣೀ ಸಂಖ್ಯೆಯುಳ್ಳ **ಅನೀಕ**-ಸೈನ್ಯಗಳ **ಕ್ಷಪಣ**-ನಾಶದಲ್ಲಿ **ಸುನಿಪುಣಂ**-ಅತಿ ಸಮರ್ಥವಾದ **ತವ**-ನಿನ್ನ **ರಣಂ**-ಯುದ್ಧವನ್ನು **ಸರ್ವೋತ್ತಮಸ್ಯ**-ಸರ್ವದೇವೋತ್ತಮನಾದ **ಯಸ್ಯ**-ಯಾವ ವೇದವ್ಯಾಸರ **ಶುಶ್ರೂಷಾರ್ಥಂ**-ಸೇವೆಯನ್ನು ಸಜ್ಜನರಿಂದ ಮಾಡಿಸುವ ಉದ್ದೇಶದಿಂದ **ಚಕರ್ಥ**-ಮಾಡಿದೆಯೋ **ಇಹ**-ನಿನ್ನ ಈ ಯುದ್ಧ ಕೌಶಲದ ವಿಷಯದಲ್ಲಿ **ಸಂವಕ್ತುಂ**-ಚೆನ್ನಾಗಿ ವರ್ಣಿಸಲು **ಅಯಂ**-ಈ ವೇದವ್ಯಾಸರೆ **ಸ್ವಯಂ**-ತಾವು **ಸಮರ್ಥ** -ಸಮರ್ಥರು **ಆನಂದ**-ಆನಂದಕ್ಕೆ **ತೀರ್ಥ**-ಕಾರಣವಾದ **ಶ್ರೀಮತ್**-ಸಂಪದ್ಯುಕ್ತವಾದ **ನಾಮನ್**-ಕೃಷ್ಣನಾಮ ಉಳ್ಳ ಹರಿಯೆ **ತ್ವಮಪಿ**-ನೀನೂ **ಸಮರ್ಥಃ**-ಸಮರ್ಥನು **ಹಿ**-ಇದು ಪ್ರಸಿದ್ಧ **ಯುವಯೋಃ**-ನಿಮ್ಮಿಬ್ಬರ **ಪಾದಪದ್ಮಂ**-ಪಾದ ಕಮಲವನ್ನು **ಪ್ರಪದ್ಯೇ**-ಶರಣು ಹೊಂದುತ್ತೇನೆ

ಶ್ರೀಕೃಷ್ಣ, ನೀನು ಅಂದು ಉತ್ಕೃಷ್ಟವಾದ ಕೌಮೋದಕೀ ಗದೆಯನ್ನು ಉಚ್ಛ್ರಂಖಲವಾದ ಬಾಹುವಿನಲ್ಲಿ ಧರಿಸಿ ಕಾಲಯವನನೊಡನೆ ಹೋರಾಡಲು ರಣರಂಗಕ್ಕೆ ಧುಮುಕಿದೆ ಸಿಂಹನಾದದೊಂದಿಗೆ ಕ್ಷೀಣಿಸದೆ ಹೆಚ್ಚುತ್ತಲೆ ಹೋಗುವ ಅಟ್ಟಹಾಸವನ್ನು ಮಾಡುತ್ತಾ ಕಾಲಯವನನ ಮೂರು ಕೋಟಿ

ಅಕ್ಷೌಹಿಣೀ ಸೈನ್ಯವನ್ನೂ ನಿಃಶೇಷವಾಗಿ ನಾಶಮಾಡಿದೆ ಇಂಥ ಅದ್ಭುತವಾದ ಯುದ್ಧವನ್ನು ಮಾಡಿ ತೋರಿದುದು 'ಸ್ಮೃತಿ ಕೀರ್ತನ ಪ್ರಣತಿಭಿರ್ವಿಮುಕ್ತಯೇ' ಎಂಬಂತೆ ವೇದವ್ಯಾಸರು ಭಾಗವತದಲ್ಲಿ ಅದನ್ನು ಚೆನ್ನಾಗಿ ವರ್ಣಿಸಲಿ, ಸಜ್ಜನರು ಸರ್ವೋತ್ತಮರಾದ ಆ ವೇದವ್ಯಾಸರ ಸೇವೆ ಮಾಡಿ ಅವರಿಂದ ನಿನ್ನ ಈ ಅದ್ಭುತ ಲೀಲೆಗಳ ಬಗ್ಗೆ ಉಪದೇಶ ಪಡೆದು ಭಕ್ತಿಯನ್ನು ಹೆಚ್ಚಿಸಿಕೊಳ್ಳಲಿ ಮುಕ್ತಿಪಡೆಯಲಿ ಎಂಬ ಉದ್ದೇಶದಿಂದಲೆ ಏಕೆಂದರೆ ಆ ನಿನ್ನ ಯುದ್ಧ ಕೌಶಲವನ್ನು ಚನ್ನಾಗಿ ವರ್ಣಿಸುವುದಕ್ಕೆ ಆ ವೇದವ್ಯಾಸರೆ ಸಮರ್ಥರು ಇನ್ನಾರಿಂದಲೂ ಆಗದು ಇನ್ನೊಬ್ಬ ಸಮರ್ಥನಾದವನೆಂದರೆ ಆ ವೇದವ್ಯಾಸರಂತೆಯೆ ಮೋಕ್ಷಾನಂದ ಕಾರಣವಾದ ಶ್ರೀಕೃಷ್ಣನಾಮ ಉಳ್ಳವನೂ ಅವರಿಂದ ಅಭಿನ್ನನೂ ಆದ ನೀನೆ ಸರಿ ನಾನಾದರೋ ನಿಮ್ಮಿಬ್ಬರ ಪಾದ ಕಮಲವನ್ನೆ ಶರಣುಹೊಂದುವೆನು ವರ್ಣನೆಗೆ ತೊಡಗುವ ಸಾಹಸ ಮಾಡಲಾರೆ

೨೧,೮೭೦ ರಥಗಳೂ, ಅಷ್ಟೇ ಆನೆಗಳೂ, ೬೫,೬೧೦ ಕುದುರೆಗಳೂ, ೧,೦೯,೩೫೦ ಕಾಲಾಳುಗಳೂ ಸೇರಿದರೆ ಒಂದು ಅಕ್ಷೌಹಿಣಿ ಎನಿಸುತ್ತದೆ

## ಭೀಮಸೇನ, ನಿನ್ನ ಯುದ್ಧ ಕೌಶಲ ಅವರ್ಣನೀಯ !

**ಅರಿಹನ್** - ಶತ್ರುಸಂಹಾರಕನಾದ **ಉದ್ಗದ** - ಉತ್ಕೃಷ್ಟವಾದ ಗದೆಯನ್ನು ಹಿಡಿದ **ಉದ್ದಾಮ** - ಉಚ್ಛಂಖಲವಾದ **ಬಾಹೋ**-ಬಾಹುಗಳುಳ್ಳ ವೃಕೋದರನೆ, **ಕ್ಷ್ವೇಲಾ**-ಸಿಂಹನಾದದಿಂದ **ಅಕ್ಷೀಣ**-ಕ್ಷೀಣವಿರುವ **ಅಟ್ಟಹಾಸಂ** - ಅಟ್ಟಹಾಸವುಳ್ಳ **ಬಹ್ವಕ್ಷೌಹಿಣೀ** - ಅನೇಕ ಅಕ್ಷೌಹಿಣಿ ಸಂಖ್ಯೆಯಲ್ಲಿರುವ **ಅನೀಕ**-ಕೌರವಸೈನ್ಯಗಳ **ಕ್ಷಪಣ** - ನಾಶದಲ್ಲಿ **ಸುನಿಪುಣಂ** - ಅತ್ಯಂತ ಕೌಶಲ್ಯಪೂರ್ಣವಾದ **ತವ**-ನಿನ್ನ **ರಣಂ**-ಯುದ್ಧವನ್ನು **ಸರ್ವೋತ್ತಮಸ್ಯ**-ಸರ್ವೋತ್ತಮನಾದ **ಯಸ್ಯ**-ಯಾವ ವೇದವ್ಯಾಸರ **ಶುಶ್ರೂಷಾರ್ಥಂ**-ಸೇವಾಗಿ **ಚಕರ್ಥ**-ಮಾಡಿದೆಯೋ **ಇಹ** - ನಿನ್ನ ಈ ಯುದ್ಧದ ವಿಷಯದಲ್ಲಿ **ಸಂವಕ್ತುಂ**-ಚೆನ್ನಾಗಿ ವರ್ಣಿಸಲು **ಅಯಂ**-ಈ ವೇದವ್ಯಾಸರೆ **ಸ್ವಯಂ**-ತಾನು **ಸಮರ್ಥಃ**-ಸಮರ್ಥರು **ಆನಂದತೀರ್ಥ**- ಆನಂದತೀರ್ಥರೆಂಬ **ಶ್ರೀಮನ್ನಾಮನ್**-ಸಂಪತ್ಕರನಾಮ

ಎಲೈ ಭೀಮಸೇನನೆ **ತ್ವಮಪಿ**-ನೀನೂ ಕೂಡ, ಮಧ್ವರೂಪದಿಂದ **ಸಮರ್ಥಃ**-ಸಮರ್ಥನಾಗಿರುವಿ

ಭೀಮಸೇನ, ನೀನು ಉತ್ಕೃಷ್ಟವಾದ ಗದೆಯನ್ನು ಉಚ್ಛ್ರಂಖಲವಾದ ಬಾಹುವಿನಲ್ಲಿ ಧರಿಸಿ ರಣರಂಗಕ್ಕೆ ಧುಮುಕಿ ಸಿಂಹನಾದ ಅಟ್ಟಹಾಸಗಳನ್ನು ಮಾಡುತ್ತಾ ಕುರುಕ್ಷೇತ್ರದಲ್ಲಿ ಹನ್ನೊಂದು ಅಕ್ಷೋಹಿಣಿ ಕೌರವಸೇನೆಯಲ್ಲಿ ಆರು ಅಕ್ಷೋಹಿಣಿಯಷ್ಟನ್ನು ನೀನೊಬ್ಬನೇ ನಾಶಮಾಡಿದಿ ಈ ಅದ್ಭುತವಾದ ಯುದ್ಧವನ್ನು ನೀನು ಮಾಡಿದುದು ಭೂಭಾರಹರಣ ಗೈದ ಶ್ರೀಕೃಷ್ಣನ ಪ್ರೀತಿಗಾಗಿ ಅವನ ಭೂಭಾರಹರಣಕಾರ್ಯದಲ್ಲಿ ಪ್ರಧಾನಾಂಗವಾಗಿ ಸೇವೆ ಸಲ್ಲಿಸುವುದಕ್ಕಾಗಿ ಈ ಯುದ್ಧವನ್ನು ವರ್ಣಿಸಲು ಸ್ವಯಂ ವ್ಯಾಸರೂಪದಿಂದ ಮಹಾಭಾರತ ಬರೆದ ಆ ಕೃಷ್ಣನೆ ಸಮರ್ಥ ಮಧ್ವ ರೂಪದಿಂದ ಮಹಾಭಾರತ ತಾತ್ಪರ್ಯ ನಿರ್ಣಯ ಬರೆದ ನೀನೂ ಇನ್ನೊಬ್ಬ ಸಮರ್ಥ ನಾನಾದರೋ ನಿಮ್ಮಿಬ್ಬರ ಪಾದಕಮಲವನ್ನೆ ಶರಣು ಹೊಂದುತ್ತೇನೆ, ಹೊರತು ವರ್ಣನೆ ಮಾಡುವ ಸಾಹಸ ಮಾಡಲಾರೆ

-೨೫-

**ದ್ರುಹ್ಯಂತೀಂ ಹೃದ್ರುಹಂ ಮಾಂ**
**ದ್ರುತಮನಿಲ ಬಲಾದ್ರಾವಯಂತೀಮವಿದ್ಯಾ -**
**ನಿದ್ರಾಂ ವಿದ್ರಾವ್ಯ ಸದ್ಯೋ**
**ರಚನಪಟುಮಥಾಪಾದ್ಯ ವಿದ್ಯಾಸಮುದ್ರ ।**
**ವಾಗ್ದೇವೀ ಸಾ ಸುವಿದ್ಯಾ -**
**ದ್ರವಿಣದ ವಿದಿತಾ ದ್ರೌಪದೀರುದ್ರಪತ್ನ್ಯಾ -**
**ದ್ಯುದ್ರಿಕ್ತಾ ದ್ರಾಗಭದ್ರಾದ್**
**ರಹಯತು ದಯಿತಾ ಪೂರ್ವಭೀಮಾಜ್ಞಯಾ ತೇ ॥**

**ಶ್ರೀಕೃಷ್ಣ, ನಿನ್ನ ಪ್ರೇಯಸಿ ವಾಗ್ದೇವಿ ಮಹಾಲಕ್ಷ್ಮಿ**

**ಅನಿಲ**-ಪರಾಶ್ರಯರಹಿತನಾದ **ವಿದ್ಯಾಸಮುದ್ರ**-ಜ್ಞಾನಸಾಗರನಾದ **ಸುವಿದ್ಯಾದ್ರವಿಣದ**-ಜ್ಞಾನಸಂಪತ್ತುದಾಯಕನಾದ **ಪೂರ್ವ**-ಆದಿಕಾರಣನಾದ

**ಭೀಮ**-ಶತ್ರು ಭಯಂಕರನಾದ ಶ್ರೀಕೃಷ್ಣನೇ, **ದ್ರೌಪದೀರುದ್ರಪತ್ನ್ಯಾದಿ**-ಭಾರತೀ ಪಾರ್ವತೀ ಮುಂತಾದವರಿಗಿಂತ **ಉದ್ರಿಕ್ತಾ**-ಶ್ರೇಷ್ಠಳಾದ **ವಾಗ್ದೇವೀ**-ಸಕಲವಾಗಭಿಮಾನಿನಿ ಎಂದು **ವಿದಿತಾ**-ಪ್ರಸಿದ್ಧಳಾದ **ತೇ**-ನಿನ್ನ **ದಯಿತಾ**-ಪ್ರೇಯಸಿಯಾದ **ಸಾ**-ಆ ಮಹಾಲಕ್ಷ್ಮಿಯು **ಹೃದ್ರುಹಂ**-ನನ್ನ ಹೃದಯದಲ್ಲಿ ಬಳೆಯುತ್ತಿರುವ **ಬಲಾತ್**-ಬಲಾತ್ಕಾರವಾಗಿ **ಮಾಂ**-ನನ್ನನ್ನು **ದ್ರಾವಯಂತೀಂ**-ಸಂಸಾರ ದುಃಖದ ಕಡೆಗೆ ಅಟ್ಟುತ್ತಿರುವ **ದ್ರುಹ್ಯಂತೀಂ**-ನನಗೆ ದ್ರೋಹಮಾಡುತ್ತಿರುವ **ಅವಿದ್ಯಾನಿದ್ರಾಂ**-ಅವಿದ್ಯೆ ಎಂಬ ನಿದ್ದೆಯನ್ನು **ತೇ**-ನಿನ್ನ **ಆಜ್ಞಯಾ**-ಆಜ್ಞೆಯಿಂದ **ದ್ರುತಂ**-ಬೇಗನೆ **ವಿದ್ರಾವ್ಯ**-ಓಡಿಸಿ **ಅಥ**-ಅನಂತರ **ಮಾಂ**-ನನ್ನನ್ನು **ಸದ್ಯೋರಚನ**-ತಕ್ಷಣವ ಸ್ತೋತ್ರಪದ್ಯ ರಚನೆ ಮಾಡುವುದರಲ್ಲಿ **ಪಟುಂ**-ಸಮರ್ಥನನ್ನಾಗಿ **ಆಪಾದ್ಯ**- ಮಾಡಿ **ದ್ರಾಕ್**-ಬೇಗನೆ **ಅಭದ್ರಾತ್**-ಅಮಂಗಳಕರವಾದ ಸಂಸಾರದಿಂದ **ರಹಯತು**-ಬಿಡುಗಡೆ ಮಾಡಲಿ

ಶ್ರೀಕೃಷ್ಣ ನೀನು ಸ್ವತಂತ್ರ ಪರರನ್ನಾಶ್ರಯಿಸದವ, ಜ್ಞಾನಸಾಗರ, ಜ್ಞಾನಸಂಪತ್ತನ್ನು ಕರುಣಿಸುವವ, ಜಗತ್ತಿಗ ಆದಿಕಾರಣ, ಶತ್ರುಭಯಂಕರ, ನಿನ್ನ ಪ್ರೇಯಸಿ ಸಕಲ ವಾಗಭಿಮಾನಿನಿ ಎಂದು ಪ್ರಸಿದ್ಧಳಾದವಳು, ಭಾರತೀ ಪಾರ್ವತೀ ಮುಂತಾದ ಎಲ್ಲ ದೇವತಾಸ್ತ್ರೀಯರಿಗಿಂತಲೂ ಶ್ರೇಷ್ಠಳಾದವಳು, ಮಹಾಲಕ್ಷ್ಮಿ ನನ್ನ ಹೃದಯದಲ್ಲಿ ಬೆಳೆದು ವೃದ್ಧಿಹೊಂದುತ್ತಿರುವ ಅವಿದ್ಯೆ ಎಂಬ ನಿದ್ದೆ ನನ್ನನ್ನೆ ಬಲಾತ್ಕಾರವಾಗಿ ಸಂಸಾರದ ದುಃಖಕ್ಕೆ ತಳ್ಳುತ್ತ ನನಗೇ ದ್ರೋಹ ಮಾಡುತ್ತಿದೆ ಅದನ್ನು ನಿನ್ನಾಜ್ಞೆಯಿಂದ ಆ ಮಹಾಲಕ್ಷ್ಮಿ ಬೇಗನೆ ಓಡಿಸಲಿ ನಿನ್ನ ಸ್ತೋತ್ರಪದ್ಯಗಳನ್ನು ತತ್ಕಾಲದಲ್ಲಿಯೆ ರಚಿಸುವ ಸಾಮರ್ಥ್ಯ ನೀಡಲಿ ಅಮಂಗಳಕರವಾದ ಈ ಸಂಸಾರದಿಂದ ನನ್ನನ್ನು ಬಿಡುಗಡೆ ಮಾಡಲಿ

**ಭೀಮಸೇನ, ನಿನ್ನ ಪ್ರೇಯಸಿ ವಾಗ್ದೇವಿ ಭಾರತಿ**

**ವಿದ್ಯಾಸಮುದ್ರ** - ಜ್ಞಾನಸಾಗರನಾದ **ಸುವಿದ್ಯಾ ದ್ರವಿಣದ** - ಜ್ಞಾನ ಸಂಪತ್ತದಾಯಕನಾದ **ಪೂರ್ವಭೀಮ** - ಹಿಂದೆ ಭೀಮಾವತಾರ ಮಾಡಿದ **ಅನಿಲ** - ವಾಯುದೇವನೆ, **ರುದ್ರಪತ್ನ್ಯಾದಿ** - ಪಾರ್ವತೀ ಮುಂತಾದ ನಾರಿಯರಿಗಿಂತ **ಉದ್ರಿಕ್ತಾ** - ಶ್ರೇಷ್ಠಳಾದ **ವಾಗ್ದೇವೀ** - ಸಕಲ

ವಾಗಾಂತರಾಭಿಮಾನಿನಿ ಎಂದು **ವಿದಿತಾ**-ಪ್ರಸಿದ್ಧಳಾದ **ತೇ**-ನಿನ್ನ **ದಯಿತಾ**-ಪ್ರೇಯಸಿಯಾದ **ಸಾ** **ದ್ರೌಪದೀ**-ಆ ದ್ರೌಪದಿಯು **ಹೃದ್ರುಹಂ**-ನನ್ನ ಹೃದಯದಲ್ಲಿ ಬೆಳೆಯುತ್ತಿರುವ **ಬಲಾತ್**-ಬಲಾತ್ಕಾರವಾಗಿ **ಮಾಂ**-ನನ್ನನ್ನು **ದ್ರಾವಯಂತೀಂ**-ಸಂಸಾರ ಮಡುವಿನ ಕಡೆಗೆ ಅಟ್ಟುತ್ತಿರುವ **ದ್ರುಹ್ಯಂತೀಂ** - ನನಗ ದ್ರೋಹಮಾಡುತ್ತಿರುವ **ಅವಿದ್ಯಾ ನಿದ್ರಾಂ**-ಅವಿದ್ಯೆ ಎಂಬ ನಿದ್ರೆಯನ್ನು **ತೇ**-ನಿನ್ನ **ಆಜ್ಞಯಾ**-ಆಜ್ಞೆಯಿಂದ **ದ್ರುತಂ**-ಬೇಗನೇ **ವಿದ್ರಾವ್ಯ**-ಓಡಿಸಿ **ಅಥ**-ಅನಂತರ **ಮಾಂ**-ನನ್ನನ್ನು **ಸದ್ಯೋರಚನ**-ತಕ್ಷಣದ ಸ್ತೋತ್ರಪದ್ಯ ರಚನೆ ಮಾಡುವುದರಲ್ಲಿ **ಪಟುಂ**- ಸಮರ್ಥನನ್ನಾಗಿ **ಆಪಾದ್ಯ**-ಮಾಡಿ **ದ್ರಾಕ್**-ಬೇಗನೆ **ಅಭದ್ರಾತ್**- ಅಮಂಗಳಕರವಾದ ಸಂಸಾರದಿಂದ **ರಹಯತು**-ಬಿಡುಗಡೆ ಮಾಡಲಿ

ವಾಯುದೇವ, ನೀನು ಜ್ಞಾನಸಾಗರ, ಜ್ಞಾನಸಂಪತ್ತನ್ನು ಕರುಣಿಸುವವ ಹಿಂದೆ ಭೀಮಾವತಾರ ಮಾಡಿದವ ಆಗ ನಿನ್ನ ಪ್ರೇಯಸಿಯಾಗಿದ್ದ ದ್ರೌಪದಿ ಸಾಕ್ಷಾತ್ ಸಕಲ ವಿದ್ಯಾವಾಂತರಾಬಿಮಾನಿನಿ ಎಂದು ಪ್ರಸಿದ್ಧಳಾದ ಭಾರತೀದೇವಿ ಅವಳ ದೇಹದಲ್ಲಿದ್ದ ಪಾರ್ವತೀ ಶಚೀ ಶ್ಯಾಮಲಾ ಉಷಾ ಎಂಬ ನಾಲ್ಕು ದೇವತಾ ಸ್ತ್ರೀಯರಿಗಿಂತ ಶ್ರೇಷ್ಠಳು ನನ್ನ ಹೃದಯದಲ್ಲಿ ಬೆಳೆದು ವೃದ್ಧಿ ಹೊಂದುತ್ತಿರುವ ಅವಿದ್ಯೆ ಎಂಬ ನಿದ್ರೆ ಅಲಸ್ಯ ನನ್ನನ್ನು ಬಲಾತ್ಕಾರವಾಗಿ ಸಂಸಾರದ ಕೋಟಲೆಗೆ ತಳ್ಳುತ್ತ ನನಗೇ ದ್ರೋಹ ಮಾಡುತ್ತಿದೆ ಅದನ್ನು ನಿನ್ನಾಜ್ಞೆಯಿಂದ ಆ ದ್ರೌಪದೀದೇವಿ ಬೇಗನೆ ದೂರ ಓಡಿಸಲಿ ನಿನ್ನ ಸ್ತೋತ್ರಪದ್ಯಗಳನ್ನು ತತ್ಕಾಲದಲ್ಲಿಯೂ ರಚಿಸುವ ಸಾಮರ್ಥ್ಯ ನೀಡಲಿ ಅಮಂಗಳಕರವಾದ ಈ ಸಂಸಾರದಿಂದ ನನ್ನನ್ನು ಬಿಡುಗಡೆಮಾಡಲಿ

೨೬

**ಯಾಭ್ಯಾಂ ಶುಶ್ರೂಷುರಾಸೀಃ**
**ಕುರುಕುಲಜನನೇ ಕ್ಷತ್ರವಿಪ್ರೋದಿತಾಭ್ಯಾಂ**
**ಬ್ರಹ್ಮಭ್ಯಾಂ ಬೃಂಹಿತಾಭ್ಯಾಂ**
**ಚಿತಿಸುಖವಪುಷಾ ಕೃಷ್ಣನಾಮಾಸ್ಪದಾಭ್ಯಾಂ**

**ನಿರ್ಭೇದಾಭ್ಯಾಂ ವಿಶೇಷಾದ್**
**ದ್ವಿವಚನವಿಷಯಾಭ್ಯಾಮುಭಾಭ್ಯಾಮಮೂಭ್ಯಾಂ**
**ತುಭ್ಯಂ ಚ ಕ್ಷೇಮದೇಭ್ಯಃ**
**ಸರಸಿಜವಿಲಸಲ್ಲೋಚನೇಭ್ಯೋ ನಮೋಽಸ್ತು ॥**

**ಶ್ರೀ ಕೃಷ್ಣವೇದವ್ಯಾಸಾತ್ಮಕ ಹರಿಗೆ ನಮೋ**
**ಮೂಲರೂಪದ ಹರಿಗೂ ನಮೋ !**

**ಚಿತಿಸುಖ**-ಜ್ಞಾನಾನಂದಾತ್ಮಕವಾದ **ವಪುಷಾ**-ಶರೀರದಿಂದ **ಬೃಂಹಿತಾಭ್ಯಾಂ**- ವ್ಯಾಪ್ತವಾದ **ಕೃಷ್ಣನಾಮಾಸ್ಪದಾಭ್ಯಾಂ**-ಕೃಷ್ಣ ಎಂದು ಹೆಸರಿಸಿದ ಕರೆಯಲ್ಪಡುತ್ತ **ಕ್ಷತ್ರವಿಪ್ರೋದಿತಾಭ್ಯಾಂ**-ಕ್ಷತ್ರಿಯ ಮತ್ತು ಬ್ರಾಹ್ಮಣ ಜಾತಿಗಳಲ್ಲಿ ಅವತರಿಸಿದ **ಬ್ರಹ್ಮಭ್ಯಾಂ**-ಪರಬ್ರಹ್ಮಸ್ವರೂಪವಾದ **ನಿರ್ಭೇದಾಭ್ಯಾಂ**-ಭೇದ ರಹಿತವಾಗಿದ್ದರೂ **ವಿಶೇಷಾತ್**-ಅಚಿಂತ್ಯ ಶಕ್ತಿ ವಿಶೇಷ ಬಲದಿಂದ **ದ್ವಿವಚನವಿಷಯಾಭ್ಯಾಂ**-ಇಬ್ಬರೆಂಬ ವ್ಯವಹಾರಕ್ಕೆ ಗೋಚರವಾದ **ಯಾಭ್ಯಾಂ ಉಭಾಭ್ಯಾಂ** - ಯಾವ ಎರಡು ರೂಪಗಳಿಂದ **ಕುರುಕುಲ**-ಕುರುವಂಶದ **ಜನನೇ**-ಜನಕರಾದ ಹಿರಿಯರಲ್ಲಿ **ಶುಶ್ರೂಷುಃ ಆಸೀಃ**-ವಿಧೇಯನಾಗಿದ್ದೆಯೊ **ಅಮೂಭ್ಯಾಂ**-ನಿನ್ನ ಈ ಎರಡು ರೂಪಗಳಿಗೂ **ತುಭ್ಯಂ ಚ**-ಮೂಲರೂಪದ ನಿನಗೂ **ಇತಿ**-ಹೀಗೆ **ಕ್ಷೇಮದೇಭ್ಯಃ**-ಲೋಕಕ್ಕೆ ಕ್ಷೇಮ ನೀಡುವ **ಸರಸಿಜ**-ಕಮಲದಂತೆ **ವಿಲಸತ್**-ಶೋಭಿಸುವ **ಲೋಚನೇಭ್ಯಃ**-ಕಣ್ಣುಗಳುಳ್ಳ ನಿಮಗ ಮೂವರಿಗೂ **ನಮಃ**-ನಮಸ್ಕಾರವು **ಅಸ್ತು**-ಇರಲಿ

ಶ್ರೀಹರಿ, ನೀನು ವಸುದೇವನಿಂದ ಯಾದವ ಕೃಷ್ಣನಾಗಿ ಕ್ಷತ್ರಿಯ ಜಾತಿಯಲ್ಲಿಯೂ ವಾಸಿಷ್ಠ ಕೃಷ್ಣನಾಗಿ ಬ್ರಾಹ್ಮಣಜಾತಿಯಲ್ಲಿಯೂ ಅವತರಿಸಿ ಕುರುವಂಶದ ಜನಕರಾದ ಹಿರಿಯರಿಗೆ ವಿಧೇಯನಾಗಿ ವ್ಯಾಸರೂಪನಾಗಿ ಕುರುವಂಶ ನಿಸ್ಸಂತತಿಯಾಗದಂತೆ ಸತ್ಯವತಿಯ ಅಪೇಕ್ಷೆಯ ಮೇರೆಗೆ ವಿಚಿತ್ರವೀರ್ಯನ ಮಡದಿಯರಲ್ಲಿ ಧೃತರಾಷ್ಟ್ರ ಪಾಂಡುರಾಜರನ್ನು ಹುಟ್ಟಿಸಿದೆ ಕೃಷ್ಣರೂಪನಾಗಿ, ಕುಂತಿಯ ಅಪೇಕ್ಷೆಯಂತೆ ಪರೀಕ್ಷಿತನನ್ನು ಬದುಕಿಸಿದೆ ಈ ಕೃಷ್ಣ ವ್ಯಾಸ ರೂಪಗಳೆರಡೂ ನಿನಗಿಂತ ಬೇರೆಯಲ್ಲ ಪರಸ್ಪರವೂ ಬೇರೆಯಲ್ಲ

ಪರಬ್ರಹ್ಮಸ್ವರೂಪವೆ ಜ್ಞಾನಾನಂದಾತ್ಮಕ ಶರೀರದಿಂದ ಎರಡು ರೂಪಗಳೂ ಸರ್ವತ್ರ ವ್ಯಾಪಕವೆ ಎರಡಕ್ಕೂ ಕೃಷ್ಣನೆಂದೆ ಹೆಸರು ಆದರೂ ಪರಸ್ಪರ ಬೇರೆಯೆ ಎರಡು ವ್ಯಕ್ತಿಗಳೆಂಬ ವ್ಯವಹಾರಕ್ಕೆ ಗೋಚರರಾಗಿದ್ದಾರ ಇದಕ್ಕೆ ಕಾರಣ ನಿನ್ನ ಅಚಿಂತ್ಯ ಶಕ್ತಿ ವಿಶೇಷ ಹೀಗೆ ಮೂವರೂ ಲೋಕಕ್ಕೆ ಸದಾ ಕ್ಷೇಮ ಉಂಟುಮಾಡಿ ಕೊಡುವಿರಿ ಅದ್ದರಿಂದ ಮೂವರಿಗೂ ನನ್ನ ನಮಸ್ಕಾರವಿರಲಿ

**ಭೀಮಸೇವಿತರಾದ ಕೃಷ್ಣವ್ಯಾಸರಿಗೆ ನಮೋ, ಭೀಮನಿಗೂ ನಮೋ !**

**ಕುರುಕುಲ**-ಕುರುವಂಶದಲ್ಲಿ **ಜನನೇ**- ಹುಟ್ಟಿದಾಗ **ಚಿತಿಸುಖ**-ಜ್ಞಾನಾನಂದಾತ್ಮಕವಾದ **ವಪುಷಾ**-ಶರೀರದಿಂದ **ಬೃಂಹಿತಾಭ್ಯಾಂ**-ವ್ಯಾಪ್ತರಾದ **ಕೃಷ್ಣನಾಮಾಸ್ಪದಾಭ್ಯಾಂ**-ಕೃಷ್ಣ ಎಂಬ ಹೆಸರಿನಿಂದ ಕರೆಯಲ್ಪಡುತ್ತ **ಕ್ಷತ್ರ ವಿಪ್ರೋದಿತಾಭ್ಯಾಂ**-ಕ್ಷತ್ರಿಯ ಮತ್ತು ಬ್ರಾಹ್ಮಣ ಜಾತಿಗಳಲ್ಲಿ ಅವತರಿಸಿದ **ಬ್ರಹ್ಮಭ್ಯಾಂ**-ಪರಬ್ರಹ್ಮ ಸ್ವರೂಪರಾದ **ನಿರ್ಭೇದಾಭ್ಯಾಂ**-ಪರಸ್ಪರ ಭೇದ ರಹಿತರಾಗಿದ್ದರೂ **ವಿಶೇಷಾತ್**-ಅಚಿಂತ್ಯ ಶಕ್ತಿ ವಿಶೇಷದ ಬಲದಿಂದ **ದ್ವಿವಚನ ವಿಷಯಾಭ್ಯಾಂ**-ಇಬ್ಬರೆಂಬ ವ್ಯವಹಾರಕ್ಕೆ ಗೋಚರರಾದ **ಯಾಭ್ಯಾಂ ಉಭಾಭ್ಯಾಂ**-ಯಾವ ಇಬ್ಬರಿಗೆ **ಶುಶ್ರೂಷುಃ ಆಸೀಃ**-ಸೇವಕನಾಗಿದ್ದೆಯೋ **ಅಮೂಭ್ಯಾಂ**-ಈ ಇಬ್ಬರಿಗೂ **ತುಭ್ಯಂ ಚ**-ನಿನಗೂ **ಇತಿ**-ಹೀಗೆ **ಕ್ಷೇಮ ದೇಭ್ಯಃ**-ಸಜ್ಜನರಿಗೆ ಕ್ಷೇಮದಾಯಕರಾದ **ಸರಸಿಜ**-ಕಮಲದಂತೆ **ವಿಲಸತ್**-ಶೋಭಿಸುವ **ಲೋಚನೇಭ್ಯಃ**-ಕಣ್ಣುಗಳುಳ್ಳ ಮೂವರಿಗೂ **ನಮಃ**-ನಮಸ್ಕಾರವು **ಅಸ್ತು**-ಇರಲಿ

ಭೀಮಸೇನ, ನೀನು ಕುರುಕುಲದಲ್ಲಿ ಭೀಮನಾಗಿ ಅವತರಿಸಿದಾಗ ಪರಬ್ರಹ್ಮ ನಾರಾಯಣನ ಅವತಾರ ಭೂತರಾದ, ಪರಸ್ಪರವೂ ಮೂಲ ರೂಪದಿಂದಲೂ ಭೇದವಿಲ್ಲದಿದ್ದರೂ ಅಚಿಂತ್ಯಶಕ್ತಿಯಿಂದ ಭೇದ ವ್ಯವಹಾರ ಗೋಚರರಾದ, ಯಾದವ ಕೃಷ್ಣ ವಾಸಿಷ್ಠ ಕೃಷ್ಣ ಎಂಬ ಹೆಸರುಗಳಿಂದ ವಸುದೇವ ಪರಾಶರರಿಂದ ಕ್ಷತ್ರಿಯ ಹಾಗೂ ಬ್ರಾಹ್ಮಣ ಜಾತಿಯಲ್ಲಿ ಅವತರಿಸಿದ ಮತ್ತು ಜ್ಞಾನಾನಂದಾತ್ಮಕ ಶರೀರದಿಂದ ಸರ್ವತ್ರವ್ಯಾಪ್ತರಾದ ಕೃಷ್ಣ ವೇದವ್ಯಾಸರಿಗೆ ವಿಧೇಯನಾಗಿ ಸೇವೆ ಮಾಡಿದೆ ಈ ಕೃಷ್ಣ ವೇದವ್ಯಾಸರಿಗೂ ನಿನಗೂ ಹೀಗೆ

ತಾವರೆಯಂತೆ ಹೊಳೆವ ಕಣ್ಣುಳ್ಳ, ಲೋಕಕ್ಕೆ ಕ್ಷೇಮದಾಯಕರಾದ ಮೂವರಿಗೂ ನನ್ನ ನಮಸ್ಕಾರವಿರಲಿ

-೨೭-

**ಗಚ್ಛನ್ ಸೌಗಂಧಿಕಾರ್ಥಂ**
**ಪಥಿ ಸ ಹನುಮತಃ ಪುಚ್ಛಮಚ್ಛಸ್ಯ ಭೀಮಃ**
**ಪ್ರೋದ್ಧರ್ತುಂ ನಾಶಕತ್ ಸ**
**ತ್ವಮುಮುರುವಪುಷಾ ಭೀಷಯಾಮಾಸ ಚೇತಿ ।**
**ಪೂರ್ಣಜ್ಞಾನೌಜಸೋಸ್ತೇ**
**ಗುರುತಮವಪುಷೋಃ ಶ್ರೀಮದಾನಂದತೀರ್ಥ**
**ಕ್ರೀಡಾಮಾತ್ರಂ ತದೇತತ್**
**ಪ್ರಮದದ ಸುಧಿಯಾಂ ಮೋಹಕ ದ್ವೇಷಭಾಜಾಂ ॥**

**ಶ್ರೀಕೃಷ್ಣ, ನೀನು ಸೋತು ಗೆದ್ದೆ !**

**ಸುಧಿಯಾಂ** - ಸದ್ಬುದ್ಧಿ ಉಳ್ಳವರಿಗೆ **ಪ್ರಮದದ** - ಆನಂದದಾಯಕನೂ **ದ್ವೇಷಭಾಜಾಂ** - ದ್ವೇಷಭಾವನೆ ಉಳ್ಳವರಿಗೆ **ಮೋಹಕ** - ಭ್ರಮೆ ಉಂಟು ಮಾಡುವವನೂ **ಶ್ರೀಮತ್** - ಜ್ಞಾನಭಕ್ತ್ಯಾದಿಸಂಪನ್ನರಿಗ **ಆನಂದತೀರ್ಥ** - ಆನಂದ ಉಂಟುಮಾಡುವವನೂ ಆದ ಶ್ರೀಕೃಷ್ಣನೆ, **ಸೌಗಂಧಿಕಾರ್ಥಂ** - ಸುಗಂಧಮಯವಾದ ಪಾರಿಜಾತಕ್ಕಾಗಿ **ಗಚ್ಛನ್**- ಹೋಗುತ್ತ **ಪಥಿ** - ದಾರಿಯಲ್ಲಿ **ಭೀಮಃ** - ಶತ್ರುಭಯಂಕರನಾದ **ಸಃ** - ಕೃಷ್ಣನು **ಅಚ್ಛಸ್ಯ**-ಶುದ್ಧ ಮನಸ್ಸಿನವನಾದ **ಹನುಮತಃ**-ಪೂರ್ವಕಲ್ಪದಲ್ಲಿ ಹನುಮಂತನಾಗಿ ಅವತರಿಸಿದ್ದ ಬ್ರಹ್ಮನ **ಪುಚ್ಛಂ** - ಶಕ್ತ್ಯಾಯುಧದಲ್ಲಿದ್ದ ಒಂದು ಅಂಶವನ್ನು **ಪ್ರೋದ್ಧರ್ತುಂ**-ಎತ್ತಿ ದೂರ ಹಾಕಲು **ನಾಶಕತ್**-ಶಕ್ತನಾಗಲಿಲ್ಲ **ಚ** - ಮತ್ತು **ಸ ತು** - ಆ ಅಂಶವಾದರೋ **ಅಮುಂ**-ಈ ಕೃಷ್ಣನನ್ನು **ಉರು**-ಶಕ್ತಿಯಲ್ಲಿ ಮಹತ್ತಾದ **ವಪುಷಾ**-ಸ್ವರೂಪದಿಂದ ಯುಕ್ತನಾಗಿ **ಭೀಷಯಾಮಾಸ**-ಭಯ ಪಡಿಸಿತು **ಇತಿ**- ಎಂಬ **ತತ್** - ಪ್ರಸಿದ್ಧವಾದ **ಏತತ್** - ಈ ಕಾರ್ಯವು **ಗುರುತಮ** - ಅತ್ಯಂತ ಶ್ರೇಷ್ಠ ಗುರುವಾದ **ವಪುಷೋಃ** - ಸ್ವರೂಪವುಳ್ಳ

**ಪೂರ್ಣಜ್ಞಾನೌಜಸೋಃ** - ಪೂರ್ಣಜ್ಞಾನ ಪೂರ್ಣಬಲಗಳುಳ್ಳ ನೀನು ಮತ್ತು ಬ್ರಹ್ಮದೇವ ಇವರಿಬ್ಬರಿಗೆ ಸಂಬಂಧಿಸಿದ **ತೇ** - ನಿನ್ನ **ಕ್ರೀಡಾಮಾತ್ರಂ** - ಕೇವಲ ಲೀಲೆಯೆ ಆಗಿದೆ

ಶ್ರೀಕೃಷ್ಣ, ನೀನು ಸತ್ಯಭಾಮೆಗೆ ಸುಗಂಧಮಯವಾದ ಪಾರಿಜಾತವನ್ನು ಸ್ವರ್ಗದಿಂದ ತರಲು ಹೊರಟು ದಾರಿಯಲ್ಲಿ ಪ್ರಾಗ್ಜ್ಯೋತಿಷನಗರದಲ್ಲಿ ನರಕಾಸುರನನ್ನು ಇದಿರಿಸಿ ಅವನು ಎಸೆದ ಶತಘ್ನೀ ಎಂಬ ಶಕ್ತ್ಯಾಯುಧವನ್ನು ನುಂಗಿದೆ, ಸ್ವಲ್ಪಕಾಲ ಆಯಾಸಗೊಂಡವನಂತೆ ರಥದಲ್ಲಿ ಸುಮ್ಮನೆ ಕುಳಿತೆ ಆಗ ಸತ್ಯಭಾಮೆ ತಾನೆ ಶಾರ್ಙ್ಗಧನುಸ್ಸನ್ನು ಕೈಗೆ ತೆಗೆದುಕೊಂಡು ಯುದ್ಧಮಾಡಿ ನರಕಾಸುರನ ಎಲ್ಲ ಆಯುಧಗಳನ್ನೂ ರಥವನ್ನೂ ನಾಶಪಡಿಸಿದಳು ಅಷ್ಟು ಕಾಲವೂ ನೀನು ಆಯಾಸಗೊಂಡವನಂತೆ ಇದ್ದುದನ್ನು ನೋಡಿ ನಿನ್ನ ದ್ವೇಷಿಗಳು ನೀನು ನಿಜವಾಗಿಯೆ ಆಯಾಸಗೊಂಡೆ, ಸೋತೆ ಎಂದು ಭ್ರಮಿಸಿದರು ಈ ಶತಘ್ನಿ ಸಾಮಾನ್ಯ ಶಸ್ತ್ರವಲ್ಲ ಬ್ರಹ್ಮನು ನರಕಾಸುರನಿಗೆ ಕೊಟ್ಟಿದ್ದು ಅದರಲ್ಲಿ ಬ್ರಹ್ಮನ ಒಂದು ಅಂಶದ ಸನ್ನಿಧಾನವಿದ್ದುದರಿಂದ ಅದನ್ನು ಕೃಷ್ಣನಿಗೆ ದೂರ ಎತ್ತಿ ಹಾಕಲಾಗಲಿಲ್ಲ ನುಂಗಿ ಆಯಾಸಪಟ್ಟ ಅದು ಶಕ್ತಿಯಲ್ಲಿ ಕೃಷ್ಣನನ್ನು ಮೀರಿಸಿ ದೊಡ್ಡದಾಗಿರುವಂಥದು ಆದ್ದರಿಂದ ಅದು ಶಸ್ತ್ರಭಯ ಎಂದರೇನೆಂಬುದನ್ನು ಕೃಷ್ಣನಿಗೆ ತೋರಿಸಿ ಕೊಟ್ಟಿತು' ಎಂದು ದುಂತಾಗಿ ಹೇಳಿಕೊಂಡರು ವಸ್ತುತಃ ಇದು ಕೇವಲ ನಟನೆ ಬ್ರಹ್ಮನು ಪೂರ್ವಕಲ್ಪದಲ್ಲಿ ಹನುಮಂತನಾಗಿ ಅವತರಿಸಿ ಸೇವೆ ಮಾಡಿದವ ಪರಶುಕ್ಲತ್ರಯದಲ್ಲಿ ಸೇರಿದ ಶುದ್ಧಮನಸ್ಸಿನವ ಪೂರ್ಣಜ್ಞಾನ ಪೂರ್ಣಬಲ ಉಳ್ಳವ ಮೂಲೋಕದ ಸಜ್ಜೀವರಿಗೆಲ್ಲರಿಗೂ ಅತ್ಯಂತ ದೊಡ್ಡಗುರುವೆನಿಸಿದವ ಆದ್ದರಿಂದ ನೀನು ಆ ಬ್ರಹ್ಮನಲ್ಲಿ ಪ್ರೀತಿಯಿಂದಲೆ ಅವನ ಅಂಶಯುಕ್ತವಾದ ಶತಘ್ನಿಗೆ ಸೋತಂತೆ ನಟಿಸಿದೆ ಮತ್ತು ದುರ್ಜನರಿಗೆ ಭ್ರಾಂತಿಕರನಾದ್ದರಿಂದ ಅವರಿಗೆ ಭ್ರಾಂತಿಉಂಟುಮಾಡಲೆಂದೂ ಹಾಗೆ ಮಾಡಿದೆ ಇದು ನಿನ್ನಾಟ ನಿನ್ನ ಉದ್ದೇಶವನ್ನು ಸಾಧಿಸಿಕೊಳ್ಳುವಲ್ಲಿ ಯಶಸ್ವಿಯಾಗಿ ಈ ಆಟದಲ್ಲಿ ದ್ವೇಷಿಗಳ ದೃಷ್ಟಿಯಲ್ಲಿ ಸೋತರೂ ಸಜ್ಜನರ ದೃಷ್ಟಿಯಲ್ಲಿ ಗೆದ್ದೆ ಆನಂದ ಉಂಟು ಮಾಡಿದೆ ಏಕೆಂದರೆ ನೀನು ಜ್ಞಾನಭಕ್ತ್ಯಾದಿ ಸಂಪತ್ತುಳ್ಳವರಿಗೆ ಮಾತ್ರ ಆನಂದ ಉಂಟುಮಾಡುವವನು ' ವಸ್ತುತಃ ನೀನು ಸೋತೆ' ಎಂದು ತಿಳಿದರೆ ಅದು

ತಪ್ಪಾಗುತ್ತದೆ ಏಕೆಂದರೆ ನೀನು ಪೂರ್ಣಜ್ಞಾನ ಪೂರ್ಣಬಲ ಉಳ್ಳವ ಬ್ರಹ್ಮನು ಸೇರಿದಂತೆ ಸಕಲ ಸಜ್ಜೀವರಿಗೂ ಅತ್ಯಂತ ದೊಡ್ಡ ಗುರುವೆನಿಸಿದವನು

## ಭೀಮಸೇನ, ನೀನು ನಿನಗೇ ಸೋತು ಗೆದ್ದೆ !

**ಸುಧಿಯಾಂ**-ಸದ್ಬುದ್ಧಿ ಉಳ್ಳವರಿಗೆ **ಪ್ರಮದದ**-ಆನಂದದಾಯಕನೂ **ದ್ವೇಷಭಾಜಾಂ**-ದ್ವೇಷಭಾವನೆ ಉಳ್ಳವರಿಗೆ **ಮೋಹಕ**-ಭ್ರಮೆಯುಂಟು ಮಾಡುವವನೂ **ಶ್ರೀಮತ್**-ಜ್ಞಾನಭಕ್ತ್ಯಾದಿಸಂಪನ್ನರಿಗೆ **ಆನಂದತೀರ್ಥ**-ಆನಂದ ಉಂಟುಮಾಡುವವನೂ ಆದ ಭೀಮಸೇನನೆ, **ಸೌಗಂಧಿಕಾರ್ಥಂ**-ಸೌಗಂಧಿಕಪುಷ್ಪವನ್ನು ತರುವುದಕ್ಕಾಗಿ **ಗಚ್ಛನ್**-ಹೋಗುತ್ತಿದ್ದ **ಸ ಭೀಮಃ**- ಆ ಭೀಮನು **ಪಥಿ**-ದಾರಿಯಲ್ಲಿ **ಅಚ್ಛಸ**-ಶುದ್ಧ ಮನಸ್ಸಿನವನಾದ **ಹನುಮತಃ**-ಹನುಮಂತನ **ಪುಚ್ಛಂ**-ಬಾಲವನ್ನು **ಪ್ರೋದ್ಧರ್ತುಂ**-ಎತ್ತಿ ಆಚೆ ಇಡಲು **ನಾಶಕತ್**-ಶಕ್ತನಾಗಲಿಲ್ಲ **ಚ**-ಮತ್ತು **ಸ ತು**- ಆ ಹನುಮಂತನಾದರೋ **ಅಮುಂ**-ಭೀಮನನ್ನು **ಉರು ವಪುಷಾ**-ದೊಡ್ಡ ರೂಪದಿಂದ ಯುಕ್ತನಾಗಿ **ಭೀಷಯಾಮಾಸ**-ಭಯಪಡಿಸಿದನು **ಇತಿ**-ಎಂದು **ತತ್**-ಪ್ರಸಿದ್ಧವಾದ **ಏತತ್**-ಈ ಕಾರ್ಯವು **ಪೂರ್ಣಜ್ಞಾನೌಜಸೋಃ**-ಪೂರ್ಣಜ್ಞಾನ ಪೂರ್ಣ ಬಲಗಳುಳ್ಳ **ತೇ**-ನಿನ್ನ **ಗುರುತಮ**-ಅತ್ಯಂತ ದೊಡ್ಡಗುರುವಾದ **ವಪುಷೋಃ**-ಎರಡು ರೂಪಗಳ **ಕ್ರೀಡಾಮಾತ್ರಂ**-ಕೇವಲ ಲೀಲೆಯೆ ಆಗಿದೆ

ಭೀಮಸೇನ ನೀನು ದ್ರೌಪದಿಗೆ ಸುಗಂಧಮಯವಾದ ಸೌಗಂಧಿಕ ಪುಷ್ಪವನ್ನು ಗಂಧಮಾದನ ಪರ್ವತದಿಂದ ತರಲು ಹೊರಟು ಕದಲೀವನದಲ್ಲಿ ಹನುಮಂತನ ಬಾಲ ದಾರಿಗೆ ಅಡ್ಡವಾಗಿದ್ದುದನ್ನು ಕಂಡು ಎತ್ತಲು ಯತ್ನಿಸಿ ಸೋತಂತೆ ತೋರಿಕೊಂಡೆ ನಿನ್ನ ದ್ವೇಷಿಗಳು ನೀನು ನಿಜವಾಗಿ ಸೋತೆ ಎಂದು ಭ್ರಮಿಸಿದರು ಹನುಮಂತನೂ ಲಂಕೆಗೆ ಹಾರಿದಾಗಿನ ತನ್ನ ದೊಡ್ಡ ರೂಪ ತೋರಿ ಭೀಮನನ್ನು ಭಯಪಡಿಸಿದಂತೆ ತೋರಿಕೊಂಡ ವಸ್ತುತಃ ನಿನ್ನ ಈ ಎರಡು ಅವತಾರ ರೂಪಗಳೂ ಮೂಲರೂಪದಂತೆಯೆ ಪೂರ್ಣಜ್ಞಾನ ಪೂರ್ಣಬಲ ಉಳ್ಳವುಗಳು ಸಜ್ಜೀವರಿಗೆ ದೊಡ್ಡ ಗುರುವೆನಿಸಿದವು ಆದ್ದರಿಂದ ದ್ವೇಷಿಗಳಿಗೆ ಭ್ರಾಂತಿ ಉಂಟು ಮಾಡುವ ನಿನ್ನ ಉದ್ದೇಶದಲ್ಲಿ ನೀನು ಸಫಲನಾಗಿ

ಈ ಆಟದಲ್ಲಿ ನೀನು ನಿನಗೇ ಸೋತು, ಗೆದ್ದ ಜ್ಞಾನಭಕ್ತ್ಯಾದಿ ಸಂಪನ್ನರಿಗೆ ಆನಂದ ಉಂಟುಮಾಡುವವ ನೀನಾದ್ದರಿಂದ ಸಜ್ಜನರಿಗೆ ಇದರಿಂದ ಆನಂದವನ್ನೆ ಉಂಟುಮಾಡಿದೆ

-೨೮-

**ಬಹ್ವೀಃ ಕೋಟೀರಟೀಕಃ**
**ಕುಟಿಲಕಟುಮತೀನ್ ಉತ್ಕಟಾಟೋಪಕೋಪಾನ್**
**ದ್ರಾಕ್ಚ ತ್ವಂ ಸತ್ವರತ್ವಾತ್**
**ಶರಣದ ಗದಯಾ ಪೋಥಯಾಮಾಸಿಥಾರೀನ್ ।**
**ಉನ್ಮಥ್ಯಾತಥ್ಯಮಿಥ್ಯಾ -**
**ತ್ವವಚನವಚನಾನ್ ಉತ್ಪಥಸ್ಥಾಂಸ್ತಥಾನ್ಯಾನ್**
**ಪ್ರಾಯಚ್ಛಃ ಸ್ವಪ್ರಿಯಾಯೈ**
**ಪ್ರಿಯತಮಕುಸುಮಂ ಪ್ರಾಣ ತಸ್ಮೈ ನಮಸ್ತೇ ॥**

**ಶ್ರೀಕೃಷ್ಣ, ನೀನು ಪಾರಿಜಾತಾಪಹರಣ ಗೈದೆ !**

**ಶರಣದ**-ಆಶ್ರಯದಾತನಾದ **ಪ್ರಾಣ**-ಪ್ರೇರಕನಾದ ಕೃಷ್ಣನೇ, **ತ್ವಂ**-ನೀನು **ಬಹ್ವೀಃ**-ನಾನಾವಿಧವಾದ **ಕೋಟೀಃ**-ಉತ್ಕರ್ಷಗಳನ್ನು **ಅಟೀಕಃ**-ಹೊಂದಿದೆ **ಕುಟಿಲ ಕಟು ಮತೀನ್**-ವಂಚಕವೂ ಕ್ರೂರವೂ ಆದ ಬುದ್ಧಿ ಉಳ್ಳ **ಉತ್ಕಟಾಟೋಪ ಕೋಪಾನ್**-ಬಹಳ ಕೋಪಾಟೋಪಗಳೂ ಉಳ್ಳ **ಅತಥ್ಯ**-ಸುಳ್ಳಾದ **ಮಿಥ್ಯಾತ್ವ ವಚನ**-ನಾನೆ ಚತುರ್ಮುಖ ಬ್ರಹ್ಮ, ನನ್ನ ಮಂತ್ರಿಗಳೆ ಲೋಕಪಾಲಕರು ಬೇರೆ ಯಾರೂ ಬ್ರಹ್ಮನಲ್ಲ ಲೋಕಪಾಲಕರೂ ಅಲ್ಲ, ಎಲ್ಲ ಸುಳ್ಳು , ಎನ್ನುವ ಮಾತನ್ನು **ವಚನಾನ್**- ಹೇಳುತ್ತಿದ್ದ **ಉತ್ಪಥಸ್ಥಾನ್**-ದುರ್ಮಾರ್ಗದಲ್ಲಿದ್ದ **ಅರೀನ್**-ಶತ್ರುಗಳಾದ ನರಕಾಸುರ ಮುಂತಾದವರನ್ನು **ದ್ರಾಕ್**-ಬೇಗನೆ **ಗದಯಾ**-ಗದೆಯಿಂದ **ಪೋಥಯಾಮಾಸಿಥ**-ಕೊಂದೆ **ತಥಾ**-ಹಾಗೇ **ಸತ್ವರತ್ವಾತ್**-ಬೇಗನೆ **ಅನ್ಯಾನ್**- ಬೇರೆ ಇಂದ್ರಾದಿ ದೇವತೆಗಳನ್ನೂ **ಉನ್ಮಥ್ಯ**-ಯುದ್ಧದಲ್ಲಿ ನಿಗ್ರಹಿಸಿ

**ಸ್ವಪ್ರಿಯಾಯೈ**-ತನ್ನ ಪ್ರೇಯಸಿಯಾದ ಸತ್ಯಭಾಮೆಗೆ **ಪ್ರಿಯತಮ**-ಅತ್ಯಂತ ಪ್ರಿಯವಾದ **ಕುಸುಮಂ**-ಹೂ ಉಳ್ಳ ಪಾರಿಜಾತ ವೃಕ್ಷವನ್ನು **ಪ್ರಾಯಚ್ಛಃ**-ಕೊಟ್ಟೆ **ತಸ್ಮೈ**- ಆ ನಿನಗೆ **ನಮಃ** - ನಮಸ್ಕಾರ

ಶ್ರೀಕೃಷ್ಣ, ನೀನು ಸಜ್ಜನರೆಲ್ಲರಿಗೂ ಆಶ್ರಯದಾತ, ಸಮಸ್ತ ಲೋಕಕ್ಕೂ ಪ್ರೇರಕ, ಪಾರಿಜಾತಾಪಹರಣ ಸಂದರ್ಭದಲ್ಲಿ ಒಮ್ಮೆಲೆ ನೀನು ನಾನಾ ಬಗೆಯ ಉತ್ಕರ್ಷ ಹೊಂದಿದೆ ಮೊದಲನೆಯದಾಗಿ ಪ್ರಾಗ್ ಜ್ಯೋತಿಷದಲ್ಲಿ ಪೀರ, ಮುರ, ನಿಶುಂಭ, ಹಯಗ್ರೀವ, ಪಂಚಜನ ಎಂಬ ನರಕಾಸುರನ ಐವರು ಮಂತ್ರಿಗಳನ್ನು ಕೊಂದೆ ಅವರೆಲ್ಲರೂ ಬ್ರಹ್ಮವರದಿಂದ ಅವಧ್ಯರೂ ಅಜೇಯರೂ ಆಗಿದ್ದರು ವಂಚಕ ಕ್ರೂರ ಬುದ್ಧಿಯವರು ಬಹು ಕೋಪಾಟೋಪದವರು ಇವರನ್ನು ಕೊಂದು, ರುದ್ರದೇವರ ವರಬಲದಿಂದ ಅವಧ್ಯರಾದ ಇವರೈವರ ಏಳು ಏಳು ಮಂದಿ ಮಕ್ಕಳನ್ನೂ ಕೊಂದೆ ನರಕಾಸುರನ ಮೂವತ್ತು ಅಕ್ಷೋಹಿಣಿ ಸೇನೆಯನ್ನೂ ಕೊಂದೆ ನಾನೆ ಚತುರ್ಮುಖ ಬ್ರಹ್ಮ ನನ್ನ ಮಂತ್ರಿಗಳೆ ಲೋಕಪಾಲಕರು, ಬ್ರಹ್ಮರುದ್ರಾದಿ ದೇವತೆಗಳಲ್ಲಿ ಯಾರೂ ಬ್ರಹ್ಮನೂ ಅಲ್ಲ, ಲೋಕಪಾಲಕರೂ ಅಲ್ಲ, ಅವರು ಹಾಗೆ ಹೇಳಿಕೊಳ್ಳುವುದೆಲ್ಲ ಸುಳ್ಳು ಎಂದು ಪ್ರಚಾರ ಮಾಡುತ್ತಿದ್ದ ದುರ್ಮಾರ್ಗಿಯಾದ ನರಕಾಸುರನನ್ನೂ ಕೊಂದೆ ಅವನು ವರಾಹರೂಪಿಯಾದ ನಿನ್ನಿಂದಲೆ ಭೂದೇವಿಯಲ್ಲಿ ಹುಟ್ಟಿ ಬ್ರಹ್ಮನಿಂದ ಅವಧ್ಯತ್ವ ಅಜೇಯತ್ವ ವರ ಪಡೆದವನು ಅಂಥ ನರಕಾಸುರನನ್ನು ಕೊಂದು ಅವನ ಆರು ಸಾವಿರ ಆನೆಗಳನ್ನೂ ಇನ್ನೂರು ಯೋಜನ ವಿಸ್ತಾರವಾಗಿ ಹರಡಿದ ಬಂಗಾರ ಹಾಗೂ ರತ್ನಗಳ ರಾಶಿಗಳನ್ನೂ ದ್ವಾರಕೆಗೆ ಕಳಿಸಿದೆ ಹದಿನಾರು ಸಾವಿರದ ನೂರು ಮಂದಿ ರಾಜಕುಮಾರಿಯರನ್ನು ನರಕಾಸುರನ ಸೆರೆಯಿಂದ ಬಿಡಿಸಿ ಅವರನ್ನೆಲ್ಲ ವಿವಾಹವಾದೆ ನರಕಾಸುರನು ಅಪಹರಿಸಿದ್ದ ದೇವಮಾತೆ ಅದಿತಿಯ ಕುಂಡಲಗಳನ್ನು ಸ್ವರ್ಗಕ್ಕೆ ಒಯ್ದು ಅವಳಿಗೆ ಹಿಂತಿರುಗಿಸಿದೆ ಸ್ವರ್ಗದ ನಂದನವನದಲ್ಲಿದ್ದ ಪಾರಿಜಾತವೃಕ್ಷವನ್ನು ಕಿತ್ತು, ಆಗ ತಡೆಯಲು ಬಂದ ಇಂದ್ರರುದ್ರಾದಿ ದೇವತೆಗಳನ್ನೂ ಗೆದ್ದು ವಿಜಯಿಯಾಗಿ ದ್ವಾರಕೆಗೆ ಬಂದೆ ಪಾರಿಜಾತವೃಕ್ಷವನ್ನು ಪ್ರೀತಿಯ ಸತ್ಯಭಾಮೆಗೆ ಇತ್ತೆ ಹೀಗೆ ಅನೇಕ ಬಗೆಯ ವಿಜಯೋತ್ಕರ್ಷಗಳನ್ನು ಹೊಂದಿದ ನಿನ್ನನ್ನು ಹೊಗಳಲು ನನಗೆ ಶಕ್ತಿ ಸಾಲದು ಆದ್ದರಿಂದ ನಮೋ ಎನ್ನುವೆನು

## ಭೀಮಸೇನ, ನೀನು ಸೌಗಂಧಿಕಾ ಹರಣ ಗೈದೆ !

**ಶರಣದ**-ಆಶ್ರಯದಾತನಾದ **ಪ್ರಾಣ**-ಮುಖ್ಯ ಪ್ರಾಣಾವತಾರನಾದ ಭೀಮಸೇನನೆ, **ತ್ವಂ**-ನೀನು **ಬಹ್ವೀಃ ಕೋಟೀಃ**-ಮುನ್ನೂರು ಕೋಟಿ ಸಂಖ್ಯೆಯಲ್ಲಿದ್ದ **ಕುಟಿಲ ಕಟುಮತೀನ್**-ವಂಚಕವೂ ಕ್ರೂರವೂ ಆದ ಬುದ್ಧಿ ಉಳ್ಳ **ಉತ್ಕಟಾಟೋಪಕೋಪಾನ್**-ಬಹಳ ಕೋಪಾಟೋಪಗಳೂ ಉಳ್ಳ **ಅರೀನ್**-ಶತ್ರುಗಳಾದ ಮಣಿಮಂತನೆ ಮೊದಲಾದ ದೈತ್ಯರನ್ನು **ಅಟೀಕಃ**-ಕೊಲ್ಲಲು ಹೋದ **ದ್ರಾಕ್**-ಬೇಗನೆ **ಗದಯಾ**-ಗದೆಯಿಂದ **ಪ್ರೋಥಯಾಮಾಸಿಥ**-ಕೊಂದ **ತಥಾ**-ಹಾಗೆಯೇ **ಅತಥ್ಯ**-ಸುಳ್ಳಾದ **ಮಿಥ್ಯಾತ್ವವಚನ**-ಜಗತ್ತು ಸುಳ್ಳು ಎನ್ನುವ ಮಾತನ್ನು **ವಚನಾನ್**-ಹೇಳುತ್ತಿದ್ದ **ಉತ್ಪಥಸ್ಥಾನ್**-ದುರ್ಮಾರ್ಗದಲ್ಲಿದ್ದ **ಅನ್ಯಾನ್ ಅರೀಂಶ್ಚ**-ಕ್ರೋಧವಶರೆಂಬ ಬೇರೆ ಶತ್ರುಗಳನ್ನೂ **ಸತ್ವರತ್ವಾತ್**-ಬೇಗನೆ **ಉನ್ಮಥ್ಯ**-ನಾಶಮಾಡಿ **ಸ್ವಪ್ರಿಯಾಯ್ಯೆ**-ತನ್ನ ಪ್ರೇಯಸಿಯಾದ ದ್ರೌಪದಿಗೆ **ಪ್ರಿಯತಮ**-ಅತ್ಯಂತ ಪ್ರಿಯವಾದ **ಕುಸುಮಂ**-ಸೌಗಂಧಿಕ ಪುಷ್ಪವನ್ನು **ಪ್ರಾಯಚ್ಛಃ**- ಕೊಟ್ಟೆ **ತಸ್ಮೈ** - ಅಂಥ **ತೇ** - ನಿನಗೆ **ನಮಃ** ನಮಸ್ಕಾರ

ಭೀಮಸೇನ, ನೀನು ಸಜ್ಜನರೆಲ್ಲರಿಗೂ ಆಶ್ರಯದಾತ ಎಲ್ಲ ಜೀವರಿಗೂ ಪ್ರೇರಕ ಮೇರುಪರ್ವತದಲ್ಲಿ ಕುಬೇರ ಭವನದ ಒಳಿಯ ಒಂದು ಸರೋವರದಲ್ಲಿ ಪಂಚವರ್ಣದ ಕಮಲಗಳಿದ್ದವು ಕೆಲವು ಹೂಗಳು ಗಾಳಿಯಲ್ಲಿ ಹಾರಿ ಬಂದು ಬದರಿಕಾಶ್ರಮದಲ್ಲಿ ಸಂಚರಿಸುತ್ತಿದ್ದ ನಿನ್ನ ಮತ್ತು ದ್ರೌಪದಿಯ ಮುಂದೆ ಬಿದ್ದವು ಆಗ ದ್ರೌಪದಿಯ ಕೋರಿಕೆಯಂತೆ ನೀನು ಆ ಕಮಲದ ಹೂಗಳನ್ನು ತರಲು ಹೋಗಿ ಕೊಳವನ್ನು ಕಾಯುತ್ತಿದ್ದ ಮುನ್ನೂರು ಕೋಟಿ ಸಂಖ್ಯೆಯ ರಾಕ್ಷಸರನ್ನೂ ಅವರಿಗೆ ಒಡೆಯನಾದ ಮಣಿಮಂತನನ್ನೂ ಗದೆಯಿಂದ ಸಂಹರಿಸಿದೆ ಅವರೆಲ್ಲರೂ ವಂಚಕ ಕ್ರೂರ ಬುದ್ಧಿಯವರು ಬಹಳ ಕೋಪಾಟೋಪ ಉಳ್ಳವರು ಇವರೆಲ್ಲರನ್ನೂ ಕೊಂದು ಪ್ರೀತಿಯ ದ್ರೌಪದಿಗೆ ಅತ್ಯಂತ ಪ್ರಿಯವಾದ ಹೂಗಳನ್ನು ಕೊಟ್ಟೆ ಇದಕ್ಕಿಂತಲೂ ಮೊದಲಿಗೆ ಗಂಧಮಾದನದ ಕುಬೇರನ ಕೊಳದಲ್ಲಿ ಅರಳಿದ್ದ ಬಂಗಾರದ ಬಣ್ಣದ ಸೌಗಂಧಿಕ ಕಮಲಗಳನ್ನೂ ತರಲು ಹೋಗಿ ಅಲ್ಲಿ ಇದಿರಾದ ಒಂದು ಲಕ್ಷ ಕ್ರೋಧವಶರೆಂಬ ದೈತ್ಯರನ್ನೂ ಕೊಂದೆ ಅವರೆಲ್ಲರೂ ಜಗನ್ಮಿಥ್ಯಾತ್ವವನ್ನು ಹೇಳುತ್ತ

ದುರ್ಮಾರ್ಗದಲ್ಲಿದ್ದರು ಅವರನ್ನು ವಾದದಲ್ಲಿ ಸೋಲಿಸಿ ಗದೆಯಿಂದಲೂ ಹೊಡೆದು ಕೊಂದೆ ಬಳಿಕ ನಿನ್ನ ಪ್ರೇಯಸಿಯಾದ ದ್ರೌಪದಿಗೆ ಅತ್ಯಂತ ಪ್ರಿಯವಾದ ಆ ಸೌಗಂಧಿಕಕಮಲಗಳನ್ನು ಇತ್ತೆ ಇಂಥ ನಿನ್ನ ಅನೇಕ ಸಾಹಸ ಕೃತ್ಯವನ್ನು ವರ್ಣಿಸಲು ನಮ್ಮ ಶಬ್ದ ಸಾಲದು ಆದ್ದರಿಂದ ನಿನಗೆ ನಮೋ ಎನ್ನುವೆನು

-೨೯-

**ದೇಹಾದುತ್ಕ್ರಾಮಿತಾನಾಂ**
**ಅಧಿಪತಿರಸತಾಂ ಅಕ್ರಮಾದ್ ವಕ್ರಬುದ್ಧಿಃ**
**ಕ್ರುದ್ಧಃ ಕ್ರೋಧೈಕವಶ್ಯಃ**
**ಕ್ರಿಮಿರಿವ ಮಣಿಮಾನ್ ದುಷ್ಕೃತೀ ನಿಷ್ಕ್ರಿಯಾರ್ಥಂ ।**
**ಚಕ್ರೇ ಭೂಚಕ್ರಮೇತ್ಯ**
**ಕ್ರಕಚಮಿವ ಸತಾಂ ಚೇತಸಃ ಕಷ್ಟಶಾಸ್ತ್ರಂ**
**ದುಸ್ತರ್ಕಂ ಚಕ್ರಪಾಣೇ-**
**ರ್ಗುಣಗಣವಿರಹಂ ಜೀವತಾಂ ಚಾಧಿಕೃತ್ಯ ॥**

**ಶ್ರೀಹರಿ, ಕಲಿಯ ಉಪದ್ರವ ಅತಿಯಾಯಿತು .**

**ಅಕ್ರಮಾತ್** - ಏಕಕಾಲದಲ್ಲಿ **ದೇಹಾತ್** - ಶರೀರದಿಂದ **ಉತ್ಕ್ರಾಮಿತಾನಾಂ** - ಹೊರಡಿಸಲ್ಪಟ್ಟ **ಅಸತಾಂ** - ಕಾಲನೇಮಿ ಮುಂತಾದ ದುರ್ಜನರಿಗೆ **ಅಧಿಪತಿಃ** - ಒಡೆಯನಾದ **ವಕ್ರಬುದ್ಧಿಃ** - ಕುಟಿಲ ಬುದ್ಧಿಯುಳ್ಳವನಾದ **ಕ್ರುದ್ಧಃ** - ಕೋಪಗೊಂಡ **ಕ್ರಿಮಿಃ** - ಸ್ವತಃ ಅಶಕ್ತವಾದ ಹುಳುವಿನಂತಿದ್ದರೂ **ಮಣಿಮಾನ್ ಇವ** - ಮಣಿ ಉಳ್ಳ ಸರ್ಪದಂತೆ **ಕ್ರೋಧೈಕವಶ್ಯಃ** - ಕೇವಲ ಕ್ರೋಧ ಪರವಶನಾದ **ದುಷ್ಕೃತೀ** - ಪಾಪಿಯಾದ ಕಲಿಯು **ನಿಷ್ಕ್ರಿಯಾರ್ಥಂ** - ಪ್ರತೀಕಾರಕ್ಕಾಗಿ **ಭೂಚಕ್ರಂ** - ಭೂಮಂಡಲವನ್ನು **ಏತ್ಯ** - ಹೊಂದಿ **ಚಕ್ರಪಾಣೇಃ** - ಚಕ್ರಧಾರಿಯಾದ ನಿನಗೆ **ಗುಣಗಣವಿರಹಂ** - ಸ್ವಾತಂತ್ರ್ಯಾದಿ ಗುಣ ಸಮೂಹದ ಅಭಾವವನ್ನೂ **ಜೀವತಾಂ**

**ಚ**-ಜೀವತ್ವವನ್ನೂ **ಅಧಿಕೃತ್ಯ** - ಕುರಿತಾಗಿ **ದುಸ್ತರ್ಕಂ** - ಕುತರ್ಕಮಯವಾದ **ಸತಾಂ**-ಸಜ್ಜನರ **ಚೇತಸಃ-** ಮನಸ್ಸಿಗೆ **ಕ್ರಕಚಮಿವ**-ಗರಗಸದಂತೆ **ಕಷ್ಟಶಾಸ್ತ್ರಂ**-ದುಃಖಕರವಾದ ಶಾಸ್ತ್ರವನ್ನು **ಚಕ್ರೇ**-ಮಾಡಿದನು

ಶ್ರೀಹರಿ, ಅಮೃತ ಮಥನ ಕಾಲದಲ್ಲಿ ದೇವತೆಗಳಿಗೆ ನೀನು ಅಮೃತ ಪ್ರಾಶನ ಮಾಡಿಸಿ ಕಾಲನೇಮಿ ಮುಂತಾದ ದೈತ್ಯರನ್ನೆಲ್ಲ ಒಮ್ಮೆಗೇ ಕೊಂದೆ ದೇವತೆಗಳಿಂದಲೂ ಕೊಲ್ಲಿಸಿದೆ ಹೀಗೆ ದಾನವ ಪಕ್ಷಕ್ಕಾದ ಮಹಾ ಪರಾಭವವನ್ನು ಕಂಡು ಅವರ ಒಡೆಯನಾದ ಪಾಪಿ ಕಲಿ ಕೋಪಗೊಂಡ ಅವನು ಸ್ವಭಾವತ: ಕ್ರಿಮಿಯಂತ ದುರ್ಬಲನಾಗಿದ್ದರೂ ದೇವಾವೇಶದಿಂದ ಬಲಿಷ್ಠನೆನಿಸಿ ಮಣಿಉಳ್ಳ ಉತ್ತಮ ಜಾತಿಯ ವಿಷಸರ್ಪದಂತೆ ಕ್ರೋಧಪರವಶನಾಗಿ ಪ್ರತೀಕಾರ ಬುದ್ಧಿಯಿಂದ ಭೂಮಿಯಲ್ಲಿ ಅಜ್ಞಾನ ಮಿಥ್ಯಾ ಜ್ಞಾನಾದಿ ನಾನಾ ರೂಪಗಳಿಂದ ಹುಟ್ಟಿಸಿದನು ಕ್ರಿಮಿಯು ಮಣಿಯನ್ನು ಕೊರೆದು ಹಾಳು ಮಾಡುವಂತೆ ಪ್ರಮಾಣಗಳಲ್ಲೆಲ್ಲ ಮಣಿಗಳಂತಿರುವ ಸಚ್ಛಾಸ್ತ್ರಗಳನ್ನು ಅಪವ್ಯಾಖ್ಯಾನಗಳ ಮೂಲಕ ಹಾಳುಗೈದು ನಿನ್ನಲ್ಲಿ ಸ್ವಾತಂತ್ರ್ಯ ಸರ್ವಶಕ್ತಿ ಮುಂತಾದ ಯಾವ ಗುಣಗಳೂ ಇಲ್ಲವೆಂದೂ ನೀನೂಬ್ಬ ಎಲ್ಲರಂತೆ ಜೀವನೆಂದೂ ಹೇಳುವ ಕುತರ್ಕ ಮಯವಾದ ಶೈವ ಪಾಶುಪತಾದಿ ಆಗಮಗಳನ್ನು ರುದ್ರಾದಿಗಳಿಂದ ಮಾಡಿಸಿದನು ಆ ಆಗಮಗಳು ಸಜ್ಜನರ ಮನಸ್ಸಿಗೆ ಗರಗಸದಂತೆ ಹಿಂಸೆಪಡಿಸುವವುಗಳು

## ಭೀಮಸೇನ, ಮಣಿಮಂತನ ಉಪದ್ರವ ಅತಿಯಾಯಿತು

**ಅಕ್ರಮಾತ್** - ಏಕಕಾಲದಲ್ಲಿ **ದೇಹಾತ್** - ಶರೀರದಿಂದ **ಉತ್ಕ್ರಾಮಿತಾನಾಂ** - ಹೊರಡಿಸಲ್ಪಟ್ಟ **ಅಸತಾಂ** - ದುಷ್ಟರಾದ ರಾಕ್ಷಸರಿಗೆ **ಅಧಿಪತಿಃ**-ಒಡೆಯನಾದ **ವಕ್ರಬುದ್ಧಿಃ**-ಕುಟಿಲ ಬುದ್ಧಿಯುಳ್ಳವನಾದ **ಕ್ರುದ್ಧಃ**-ಕೋಪಗೊಂಡ **ಕ್ರಿಮಿಃ ಇವ**-ಸ್ವಭಾವತಃ ಅಶಕ್ತನಾದ ಕ್ರಿಮಿಯಂತೆಯೇ ಇದ್ದು **ಕ್ರೋಧೈಕವಶ್ಯಃ**-ಕೇವಲ ಕ್ರೋಧಕ್ಕೇ ವಶನಾದ **ದುಷ್ಕೃತೀ** ಪಾಪಿಯಾದ **ಮಣಿಮಾನ್** - ಮಣಿಮಂತನು **ನಿಷ್ಕ್ರಿಯಾರ್ಥಂ** - ಪ್ರತೀಕಾರಕ್ಕಾಗಿ **ಭೂಚಕ್ರಂ** - ಭೂಮಂಡಲವನ್ನು **ಏತ್ಯ** - ಹೊಂದಿ **ಚಕ್ರಪಾಣೇಃ-** ಚಕ್ರಧಾರಿಯಾದ ಶ್ರೀಹರಿಗೆ **ಗುಣಗಣವಿರಹಂ**-ವಾಸ್ತವ ಗುಣಗಳ

ಅಭಾವವನ್ನೂ **ಜೀವತಾಂ ಚ**-ಜೀವಾಭೇದವನ್ನೂ **ಅಧಿಕೃತ್ಯ**- ಕುರಿತಾಗಿ **ದುಸ್ತರ್ಕಂ**-ಕುತರ್ಕಮಯವಾದ **ಸತಾಂ**-ಸಜ್ಜನರ **ಚೇತಸಃ**- ಮನಸ್ಸಿಗೆ **ಕ್ರಕಚಮಿವ**-ಗರಗಸವಂತೆ **ಕಷ್ಟಶಾಸ್ತ್ರಂ** - ದುಃಖಕರವಾದ ಶಾಸ್ತ್ರವನ್ನು **ಚಕ್ರೇ**-ಮಾಡಿದನು

ಭೀಮಸೇನ, ಮೇರುಪರ್ವತದ ಕುಬೇರ ಭವನದ ಬಳಿಯ ಕೊಳದಿಂದ ಪಂಚವರ್ಣದ ಕಮಲಗಳನ್ನು ನೀನು ಕೀಳುವ ಸಮಯದಲ್ಲಿ ಮುನ್ನೂರು ಕೋಟಿ ಸಂಖ್ಯೆಯಲ್ಲಿದ್ದ ರಾಕ್ಷಸರ ಪಡೆಯನ್ನೂ ಅವರಿಗೆ ಒಡೆಯನಾದ ಮಣಿಮಂತನನ್ನೂ ಒಮ್ಮೆಲೆ ಕೊಂದುಬಿಟ್ಟೆ ಆದರಿಂದ ಪಾಪಿ ಮಣಿಮಂತನು ಕೆಟ್ಟಾಗಿ ಸ್ವಭಾವತಃ ಕೇವಲ ಅಶಕ್ತವಾದ ಕ್ರಿಯೆಯುಂತಿದ್ದರೂ ದೇವಾವೇಶದಿಂದ ಬಲಿಷ್ಠನಾಗಿ, ಕೇವಲ ಕೋಪಪರವಶತೆಯಿಂದ ಪ್ರತೀಕಾರಕ್ಕಾಗಿ ಭೂಮಿಗೆ ಬಂದು ಕುಟಿಲ ಬುದ್ಧಿಯಿಂದ, ನಿನಗೆ ಆರಾಧ್ಯನಾದ ಭಗವಂತನಲ್ಲಿ ಜೀವನಲ್ಲಿಲ್ಲದ ಸರ್ವಜ್ಞತ್ವಾದಿ ಯಾವ ಗುಣವೂ ವಾಸ್ತವವಾಗಿ ಇಲ್ಲವೆಂದೂ ಆದರಿಂದಲೇ ಅವನು ಎಲ್ಲ ಜೀವರಿಂದಲೂ ವಾಸ್ತವವಾಗಿ ಅಭಿನ್ನನೆಂದೂ ಸಾಧಿಸುವ ಕುತರ್ಕಮಯವಾದ ಶಾಸ್ತ್ರಗಳನ್ನು ರಚಿಸಿದನು ಈ ಶಾಸ್ತ್ರಗಳು ನಿನ್ನ ಪ್ರೀತಿಪಾತ್ರರಾದ ಸಜ್ಜನರ ಮನಸ್ಸಿಗೆ ಗರಗಸದಂತೆ ನೋವನ್ನುಂಟು ಮಾಡುತ್ತವೆ ಭಗವದ್ಭಕ್ತನೂ ಸಜ್ಜನ ರಕ್ಷಕನೂ ಆದ ನಿನಗೆ ಈ ರೀತಿ ಪ್ರತೀಕಾರ ಮಾಡಿದ್ದಾನೆ ಈ ರಾಕ್ಷಸ

-೩೦-

**ತದ್ದುಷ್ಪ್ರೇಕ್ಷಾನುಸಾರಾತ್**
**ಕತಿಪಯ ಕುನರೈರಾದೃತೋಽನ್ಯೈರ್ವಿಸೃಷ್ಟೋ**
**ಬ್ರಹ್ಮಾಹಂ ನಿರ್ಗುಣೋಽಹಂ**
**ವಿತಥಮಿದಮಿತಿ ಹ್ಯೇಷ ಪಾಷಂಡವಾದಃ ।**
**ತದ್ಯುಕ್ತ್ಯಾಭಾಸಜಾಲ**
**ಪ್ರಸರವಿಷತರೂದ್ದಾಹದಕ್ಷಪ್ರಮಾಣ**
**ಜ್ವಾಲಾಮಾಲಾಧರಾಗ್ನಿಃ**
**ಪವನ ವಿಜಯತೇ ತೇಽವತಾರಸ್ತೃತೀಯಃ ॥**

## ಶ್ರೀಹರಿಯೇ, ವಾಯುವೆ, ನಿಮ್ಮ ಮೂರನೆಯ ಅವತಾರ....

**ಪವನ**-ಪರಿಶುದ್ಧಿ ಉಂಟುಮಾಡುವವನೆ, **ಅಹಂ**-ನಾನು **ಬ್ರಹ್ಮ**-ಪರಬ್ರಹ್ಮನಾಗಿದ್ದೇನೆ **ನಿರ್ಗುಣಃ**-ನಿರ್ಗುಣನಾಗಿದ್ದೇನೆ **ಇದಂ**-ಈ ಜಗತ್ತು **ವಿತಥಂ**-ಸುಳ್ಳಾಗಿದೆ **ಇತಿ**-ಎಂದು **ವಿಷ ಪಾಷಂಡ ವಾದಃ**-ಈ ವೇದ ವಿರುದ್ಧವಾದ ವಾದವು **ತತ್**-ಆ ಕಲಿಯ ಮತ್ತು ಆ ಮಣಿಮಂತನ **ದುಷ್ಪ್ರೇಕ್ಷಾ**-ದುರ್ಬುದ್ಧಿಗೆ **ಅನುಸಾರಾತ್**-ಅನುಸಾರವಾಗಿ **ಕತಿಪಯಕುನರೈಃ**-ಕೆಲವು ದುಷ್ಟ ಮಾನವರಿಂದ **ಆದೃತಃ** - ಆದರಿಸಲ್ಪಟ್ಟಿತು **ಅನ್ಯೈಃ**-ಅನ್ಯರಿಂದ **ವಿಸೃಷ್ಟಃ** - ಪರಿತ್ಯಕ್ತವಾಯಿತು **ತತ್** - ಅವರ **ಯುಕ್ತ್ಯಾಭಾಸಜಾಲ** - ಕುತರ್ಕ ಸಮೂಹದ **ಪ್ರಸರ**-ವಿಸ್ತಾರವೆಂಬ **ವಿಷತರು**-ವಿಷವೃಕ್ಷದ **ಉದ್ದಾಹ**-ಸುಡುವಿಕೆಯಲ್ಲಿ **ದಕ್ಷ**-ಸಮರ್ಥವಾದ **ಪ್ರಮಾಣ**-ಪ್ರಮಾಣಗಳೆಂಬ **ಜ್ವಾಲಾ ಮಾಲಾ**-ಜ್ವಾಲೆಗಳ ಸಮೂಹವನ್ನು **ಧರ**-ಧರಿಸಿರುವ **ಅಗ್ನಿಃ**- ಬೆಂಕಿಯಂತಿರುವ **ತೇ**-ನಿನ್ನ **ತೃತೀಯಃ ಅವತಾರಃ**-ಮೂರನೆ ಅವತಾರವು **ವಿಜಯತೇ**-ಮೆರೆಯುತ್ತಿದೆ

ಶ್ರೀಹರಿಯೆ ಮತ್ತು ವಾಯುವೆ, ನೀವಿಬ್ಬರೂ ತತ್ತ್ವಜ್ಞಾನದಿಂದ ಜೀವರನ್ನು ಪರಿಶುದ್ಧಗೊಳಿಸುವವರು ಆ ಕಲಿಯ ಮತ್ತು ಮಣಿಮಂತನ ದುರ್ಬುದ್ಧಿಗೆ ಅನುಸಾರವಾಗಿ ಕೆಲವು ದುಷ್ಟಮಾನವರು, ನಾನು ಬ್ರಹ್ಮ, ನಿರ್ಗುಣ ಜಗತ್ತು ಸುಳ್ಳು' ಎನ್ನುವ ವೇದ ವಿರುದ್ಧವಾದ ವಾದವನ್ನು ಪುರಸ್ಕರಿಸಿದರು ಆದರೆ ಸಜ್ಜನರು ತಿರಸ್ಕರಿಸಿದರು ಏಕೆಂದರೆ ಆ ದುಷ್ಟರ ಕುತರ್ಕವೆಂಬ ವಿಷ ವೃಕ್ಷವನ್ನು ಸುಟ್ಟು ಬೂದಿಮಾಡುವುದರಲ್ಲಿ ನಿಮ್ಮ ಮೂರನೆ ಅವತಾರ ಭೂತರಾದ ವೇದವ್ಯಾಸ ಮಧ್ವರು ಉದಾಹರಿಸುವ ಪ್ರಮಾಣಗಳೆಂಬ ಜ್ವಾಲೆಗಳು ಅತ್ಯಂತ ಸಮರ್ಥವಾಗಿವೆ ಅಂಥ ಜ್ವಾಲೆಗಳಿಂದ ಜ್ವಲಿಸುವ ನೀವು ವಿಜಯಿಗಳಾಗಿ ಮೆರೆಯುತ್ತಿರುವಿರಿ

-೩೧-

**ಆಕ್ರೋಶಂತೋ ನಿರಾಶಾ**
**ಭಯಭರವಿವಶಸ್ವಾಶಯಾಶ್ಛಿನ್ನದರ್ಪಾ**
**ವಾಶಂತೋ ದೇಶನಾಶ -**
**ಸ್ತ್ವಿತಿ ಬತ ಕುಧಿಯಾಂ ನಾಶಮಾಶಾ ದಶಾಶು ।**
**ಧಾವಂತೋಽಶ್ಲೀಲಶೀಲಾ**
**ವಿತಥಶಪಥಶಾಪಾಶಿವಾಃ ಶಾಂತಶೌರ್ಯಾ-**
**ಸ್ತ್ವದ್ವ್ಯಾಖ್ಯಾಸಿಂಹನಾದೇ**
**ಸಪದಿ ದದೃಶಿರೇ ಮಾಯಿಗೋಮಾಯವಸ್ತೇ ॥**

**ಶ್ರೀಹರಿಯೆ, ವಾಯುವೆ, ನಿಮ್ಮ ಪ್ರವಚನಧ್ವನಿ ...**

**ತ್ವದ್ವ್ಯಾಖ್ಯಾ**-ನಿಮ್ಮ ಪ್ರವಚನವೆಂಬ **ಸಿಂಹನಾದೇ**-ಸಿಂಹಗರ್ಜನೆ ಉಂಟಾಗಲು **ಸಪದಿ**-ಕೂಡಲೆ **ತೇ ಮಾಯಿಗೋಮಾಯವಃ**-ಆ ಮಾಯಾವಾದಿಗಳೆಂಬ ನರಿಗಳು **ಆಕ್ರೋಶಂತಃ**-ನಮಗೇನು ಗತಿ ಎಂದು ಕೂಗುತ್ತ **ನಿರಾಶಾಃ**- ಜಯದಾಸ ತೊರೆದು **ಭಯಭರ**-ಮಹಾಭಯದಿಂದ **ವಿವಶ**-ಪರವಶವಾದ **ಸ್ವಾಶಯಾಃ**-ತಮ್ಮ ಮನಸ್ಸುಳ್ಳವರಾಗಿ **ಛಿನ್ನದರ್ಪಾಃ** -ಅಳಿದ ಅಹಂಕಾರ ಉಳ್ಳವರಾಗಿ **ಕುಧಿಯಾಂ**-ದುರ್ಬುದ್ಧಿಯುವರಾದ ತಮ್ಮ **ನಾಶಂ**-ನಾಶವನ್ನು **ದೇಶನಾಶಸ್ತು ಬತ**-ಅಯ್ಯೋ ಇದು ದೇಶಕ್ಕೇ ಬಂದಿರುವ ಗಂಡಾಂತರ **ಇತಿ**-ಎಂದು **ವಾಶಂತಃ**-ಕೂಗಿ ಕೊಳ್ಳುತ್ತ **ದಶ ಆಶಾಃ**-ಹತ್ತು ದಿಕ್ಕುಗಳ ಕಡೆಗೆ **ಆಶು**-ಬೇಗನೆ **ಧಾವಂತಃ**-ಓಡುತ್ತ **ಅಶ್ಲೀಲಶೀಲಾಃ**- ಅಮಂಗಲ ನಡತೆ ಉಳ್ಳವರಾಗಿ **ವಿತಥ**-ಸುಳ್ಳಾದ **ಶಪಥ ಶಾಪ**-ಶಪಥ ಮತ್ತು ಶಾಪಗಳಿಂದ **ಅಶಿವಾಃ**-ಅಮಂಗಳಕರರಾಗಿ **ಶಾಂತ ಶೌರ್ಯಾಃ**-ಅಡಗಿದ ಶೌರ್ಯಉಳ್ಳವರಾಗಿ **ದದೃಶಿರೇ**-ಕಂಡುಬಂದರು

ವೇದವ್ಯಾಸರೆ, ಮಧ್ವರೆ, ನಿಮ್ಮ ಪ್ರವಚನದ ಧ್ವನಿ ಸಿಂಹನಾದದಂತ ಮೊಳಗಲಾರಂಭಿಸಿದೊಡನೆ ಆ ಮಾಯಾವಾದಿಗಳು ನರಿಗಳಂತೆ ಬೆದರಿ 'ನಮಗೆ ಇನ್ನೇನು ಗತಿ ? ಎಂದು ಕೂಗಿಕೊಂಡರು ಜಯದಾಸೆ ಬಿಟ್ಟರು, ಮಹಾಭಯ

ಅವರ ಹೃದಯವನ್ನು ಆವರಿಸಿತು ದರ್ಪ ಮುರಿಯಿತು ಶೌರ್ಯ ಅಡಗಿತು ದುರ್ಬುದ್ಧಿಯವರಾದ ತಮ್ಮ ಈ ಪರಾಭವವನ್ನು 'ಅಯ್ಯೋ ! ಇದು ದೇಶಕ್ಕೇ ಒದಗಿದ ಗಂಡಾಂತರ !' ಎಂದು ಕೂಗಿಕೊಂಡರು 'ನಿಮ್ಮ ನಿಗ್ರಹ ಮಾಡುವೆವೆಂ'ದು ವ್ಯರ್ಥ ಶಪಥ ಮಾಡಿದವರು ಅದರಲ್ಲಿ ಸೋತು, ಹಾಳಾಗಿ ಹೋಗಿರೆಂದು ವ್ಯರ್ಥ ಶಾಪ ಹಾಕಿದರು ಅಮಂಗಲ ನಡತೆಯವರಾದರು ಹತ್ತು ದಿಕ್ಕುಗಳಿಗೆ ಓಡಿ ತಲೆಮರೆಸಿಕೊಂಡರು ಇದನ್ನೆಲ್ಲ ಜನ ನೋಡುವಂತಾಯಿತು

-೩೨-

**ತ್ರಿಷ್ವಪ್ಯೇವಾವತಾರೇ**
**ಷ್ವರಿಭಿರಪಘೃಣಂ ಹಿಂಸಿತೋ ನಿರ್ವಿಕಾರಃ**
**ಸರ್ವಜ್ಞ ಃ ಸರ್ವಶಕ್ತಿಃ**
**ಸಕಲಗುಣಗಣಾಪೂರ್ಣರೂಪಪ್ರಗಲ್ಭಃ** ।
**ಸ್ವಚ್ಛಃ ಸ್ವಚ್ಛಂದಮೃತ್ಯುಃ**
**ಸುಖಯಸಿ ಸುಜನಂ ದೇವ ಕಿಂ ಚಿತ್ರಮತ್ರ**
**ತ್ರಾತಾ ಯಸ್ಯ ತ್ರಿಧಾಮಾ**
**ಜಗದುತ ವಶಗಂ ಕಿಂಕರಾಃ ಶಂಕರಾದ್ಯಾಃ** ॥

**ಶ್ರೀಹರಿ, ನೀನು ಸರ್ವೋತ್ತಮ, ಶತ್ರುಗಳಿಗೆ ಮಣಿಯುವವನಲ್ಲ.**

**ದೇವ**-ದೇವನೆ, **ತ್ರಿಷು ಅವತಾರೇಷ್ವಪಿ** - ರಾಮ ಕೃಷ್ಣ ವೇದವ್ಯಾಸರೆಂಬ ಮೂರು ಅವತಾರಗಳಲ್ಲಿಯೂ **ಅರಿಭಿಃ** - ಶತ್ರುಗಳಿಂದ **ಅಪಘೃಣಂ**-ನಿರ್ದಯವಾಗಿ **ಹಿಂಸಿತೋಽಪಿ**-ಹಿಂಸಿಸಲ್ಪಟ್ಟರೂ **ನಿರ್ವಿಕಾರಃ**-ನಿರ್ವಿಕಾರನಾಗಿದ್ದವನು **ಸರ್ವಜ್ಞಃ**-ಸರ್ವಜ್ಞನು, **ಸರ್ವಶಕ್ತಿಃ**-ಸರ್ವಕಾರ್ಯಗಳಲ್ಲಿಯೂ ಶಕ್ತಿ ಉಳ್ಳವನು **ಸಕಲ ಗುಣಗಣ**-ಎಲ್ಲ ಗುಣಸಮೂಹಗಳಿಂದ **ಆಪೂರ್ಣ**-ಪೂರ್ಣವಾಗಿ ತುಂಬಿದ **ರೂಪ**-ಸ್ವರೂಪದಿಂದ **ಪ್ರಗಲ್ಭಃ**-ಪ್ರೌಢನಾದವನು **ಸ್ವಚ್ಛಃ**- ಪಾಪಾದಿಲೇಪರಹಿತನು **ಸ್ವಚ್ಛಂದಮೃತ್ಯುಃ**-ತನ್ನಿಚ್ಛೆಗೆ ಅನುಸಾರ ವರ್ತಿಸುವ ಯಮನುಳ್ಳವನು ಇಂಥ

ನೀನು **ಸುಜನಂ**-ಸಜ್ಜನರನ್ನು **ಸುಖಯಸಿ**-ಸುಖಪಡಿಸುವಿ **ಅತ್ರ**-ಈ ವಿಷಯದಲ್ಲಿ **ಚಿತ್ರಂ ಕಿಂ**- ಆಶ್ಚರ್ಯವೇನಿದೆ ? **ಯಸ್ಯ**-ಯಾವ ಜಗತ್ತಿಗ **ತ್ರಾತಾ**-ರಕ್ಷಕನು **ತ್ರಿಧಾಮಾ**- ಶ್ವೇತ ದ್ವೀಪಾದಿ ಧಾಮತ್ರಯ ಉಳ್ಳ ನೀನೇ ಆಗಿರುವೆಯೋ ಅಂಥ **ಜಗತ್**- ಜಗತ್ತು ನಿನಗೆ **ವಶಗಂ**-ವಶದಲ್ಲಿರುವುದು ತಾನೆ ? **ಉತ**-ಮತ್ತು **ಶಂಕರ**- ರುದ್ರನೂ **ಅ**-ಪಿತಾಮಹನಾದ ಬ್ರಹ್ಮನೂ **ಆದ್ಯಾಃ**-ಇವರೆ ಮುಂತಾದ ದೇವತೆಗಳು **ಕಿಂಕರಾಃ**-ನಿನ್ನ ಸೇವಕರೆ ತಾನೆ ?

ಶ್ರೀಹರಿ, ನೀನು ರಾಮನಾಗಿ ರಾವಣಾದಿಗಳಿಂದಲೂ, ಕೃಷ್ಣನಾಗಿ ಕಂಸಾದಿಗಳಿಂದಲೂ, ವೇದವ್ಯಾಸನಾಗಿ ಶೈವ ಪಾಶುಪತಾದಿಗಳಿಂದಲೂ ನಿರ್ದಯವಾಗಿ ಹಿಂಸಿಸಲ್ಪಟ್ಟಿರುವವ

ಸತ್ಯಂ ಸತ್ಯಂ ಪುನಃ ಸತ್ಯಂ ಉದ್ಧೃತ್ಯ ಭುಜಮುಚ್ಯತೇ ॥
ವೇದಶಾಸ್ತ್ರಾತ್ ಪರಂ ನಾಸ್ತಿ ನ ದೈವಂ ಕೇಶವಾತ್ ಪರಂ ॥

ಎಂದು ಭೀಷ್ಮರು ಭುಜವೆತ್ತಿ ಶಪಥಮಾಡಿ ವಿಷ್ಣು ಸರ್ವೋತ್ತಮತ್ವವನ್ನು ಧರ್ಮರಾಜನಿಗೆ ಉಪದೇಶಿಸಿದರು ಅದನ್ನು ಶೇಷಧರ್ಮದ ಆಶ್ವರ್ಯಪರ್ವದಲ್ಲಿ ವೇದವ್ಯಾಸರು ಉಲ್ಲೇಖಿಸಿದರೆಂದು ವೇದವ್ಯಾಸರ ಭುಜವನ್ನು ಛೇದಿಸಬೇಕೆನ್ನುವವರು ಶೈವ ಪಾಶುಪತಾದಿಗಳು ಅವರು ಹೀಗ ಮಾತಿನಿಂದ ವೇದವ್ಯಾಸರಿಗೆ ನಿರ್ದಯವಾಗಿ ಹಿಂಸಿಸಿದ್ದಾರೆ ಹೀಗೆ ಮೂರು ಅವತಾರಗಳಲ್ಲಿಯೂ ಶತ್ರುಗಳಿಂದ ಹಿಂಸಿಸಲ್ಪಟ್ಟರೂ ಸಕಲಗುಣ ಪೂರ್ಣನಾದ ನೀನು ನಿರ್ವಿಕಾರನಾಗಿ ನಿರ್ಲೇಪನಾಗಿದ್ದು ಸಜ್ಜನರನ್ನು ಸಂತೋಷಪಡಿಸಿದೆ ಇದರಲ್ಲಿ ಆಶ್ಚರ್ಯವೇನಿಲ್ಲ, ಏಕೆಂದರೆ ನೀನು ಸರ್ವಜ್ಞ, ಸರ್ವಶಕ್ತ, ನಿನಗ ಮರಣವಿಲ್ಲ, ಯಮನೂ ನಿನ್ನಿಚ್ಛೆಯಂತೇ ನಡೆಯುವವನು ಇಡೀ ಜಗತ್ತಿಗ ನೀನೇ ರಕ್ಷಕನೆಂದ ಮೇಲೆ ಜಗತ್ತು ನಿನ್ನ ವಶವೆ ತಾನೆ ? ರುದ್ರ ಬ್ರಹ್ಮಾದಿ ದೇವತಗಳೂ ನಿನ್ನ ಕಿಂಕರರೇ ತಾನೆ ?

## ವಾಯು, ನೀನು ಜೀವೋತ್ತಮ, ಶತ್ರುಗಳಿಗೆ ಮಣಿಯುವವನಲ್ಲ

**ದೇವ**-ದೇವನೆ **ತ್ರಿಷು ಅವತಾರೇಷ್ವಪಿ**-ಹನುಮ ಭೀಮ ಮಧ್ವರೆಂಬ ಮೂರು ಅವತಾರಗಳಲ್ಲಿಯೂ **ಅರಿಭಿಃ**-ಶತ್ರುಗಳಿಂದ **ಅಪಘೃಣಂ**-ನಿರ್ದಯವಾಗಿ **ಹಿಂಸಿತೋಽಪಿ**-ಹಿಂಸಿಸಲ್ಪಟ್ಟರೂ **ನಿರ್ವಿಕಾರಃ**-

ನಿರ್ವಿಕಾರನಾಗಿದ್ದವನು **ಸರ್ವಜ್ಞಃ**-ಸರ್ವಜ್ಞನು **ಸರ್ವಶಕ್ತಿಃ**-ಸರ್ವಕಾರ್ಯಸಾಮರ್ಥ್ಯ ಉಳ್ಳವನು **ಸಕಲಗುಣಗಣ**-ಎಲ್ಲ ಗುಣಸಮೂಹಗಳಿಂದಲೂ **ಆಪೂರ್ಣ**-ಪೂರ್ಣವಾಗಿ ತುಂಬಿದ **ರೂಪ**-ಸ್ವರೂಪದಿಂದ **ಪ್ರಗಲ್ಭಃ**-ಪ್ರೌಢನಾದವನು **ಸ್ವಚ್ಛಃ**- ಪಾಪಾದಿಲೇಪರಹಿತನು **ಸ್ವಚ್ಛಂದ ಮೃತ್ಯುಃ**-ಸ್ವೇಚ್ಛಾಮರಣಿ ಇಂಥ ನೀನು **ಸುಜನಂ**-ಸಜ್ಜನರನ್ನು **ಸುಖಯಸಿ**-ಸುಖಪಡಿಸುವಿ **ಯಸ್ಯ**-ಯಾರಿಗೆ **ತ್ರಿಧಾಮಾ**-ಶ್ವೇತದ್ವೀಪಾದಿ ಧಾಮತ್ರಯದಲ್ಲಿರುವ ಶ್ರೀಹರಿ **ತ್ರಾತಾ**- ರಕ್ಷಕನಾಗಿರುವನೋ **ಜಗತ್**-ಜಗತ್ತು **ವಶಗಂ**-ವಶದಲ್ಲಿದೆಯೊ **ಉತ**- ಮತ್ತು **ಶಂಕರಾದ್ಯಾಃ**-ರುದ್ರಾದಿ ದೇವತೆಗಳು **ಕಿಂಕರಾಃ**- ಸೇವಕರಾಗಿರುವರೋ **ಅತ್ರ**-ಈ ನಿನ್ನಲ್ಲಿ ಚಿತ್ರಂ **ಕಿಂ**-ಆಶ್ಚರ್ಯವೇನು ?

ವಾಯುದೇವ, ನೀನು ಹನುಮನಾಗಿ ರಾವಣಾದಿಗಳಿಂದಲೂ, ಭೀಮನಾಗಿ ದುರ್ಯೋಧನಾದಿಗಳಿಂದಲೂ, ಮಧ್ವರಾಗಿ ಗಂಡವಾಟಾದಿಗಳಿಂದಲೂ ನಿರ್ದಯವಾಗಿ ಹಿಂಸಿಸಲ್ಪಟಿರುವಿ ಆದರೂ ನೀನು ನಿರ್ವಿಕಾರನೂ ನಿರ್ಲೇಪನೂ ಆಗಿದ್ದು ಸಜ್ಜನರನ್ನು ಸಂತೋಷಪಡಿಸಿದೆ ಇದರಲ್ಲಿ ಆಶ್ಚರ್ಯವೇನಿದೆ ? ಏಕೆಂದರೆ ನೀನು ಸರ್ವಜ್ಞ, ಸರ್ವಶಕ್ತ, ಸಕಲಗುಣ ಪೂರ್ಣ, ಸ್ವೇಚ್ಛಾಮರಣಿ, ಯಮನೂ ನಿನ್ನಾಜ್ಞೆಯಂತೆಯೆ ನಡೆಯುವವನು, ನಿನಗೆ ಶ್ವೇತದ್ವೀಪಾದಿ ಧಾಮತ್ರಯದಲ್ಲಿರುವ ಶ್ರೀಹರಿ ರಕ್ಷಕನಾಗಿದ್ದಾನೆ ಜಗತ್ತೆಲ್ಲ ನಿನ್ನ ವಶದಲ್ಲಿದೆ ಮತ್ತು ರುದ್ರಾದಿಗಳೂ ನಿನ್ನ ಕಿಂಕರರ ಆಗಿದ್ದಾರೆ

-೩೩-

**ಉದ್ಯನ್ಮಂದಸ್ಮಿತಶ್ರೀ -**
**ಮೃದುಮಧುಮಧುರಾಲಾಪಪೀಯೂಷಧಾರಾ**
**ಪೂರಾಸೇಕೋಪಶಾಂತಾ -**
**ಸುಖಸುಜನಮನೋಲೋಚನಾಪೀಯಮಾನಂ।**
**ಸಂದ್ರಕ್ಷ್ಯೇ ಸುಂದರಂ ಸಂ -**
**ದುಹದಿಹ ಮಹದಾನಂದಮಾನಂದತೀರ್ಥ-**

**ಶ್ರೀಮದ್ವಕ್ತ್ರೇಂದುಬಿಂಬಂ**
**ದುರಿತನುದುದಿತಂ ನಿತ್ಯದಾಹಂ ಕದಾ ನು ॥**

**ವೇದವ್ಯಾಸರೆ, ಮಧ್ವರೆ, ನಿಮ್ಮ ಮುಖಚಂದ್ರಮನನ್ನು ನಾನೆಂದು ನಿತ್ಯ ನೋಡುವೆನೊ !**

**ಶ್ರೀಮತ್** - ಜ್ಞಾನಭಕ್ತ್ಯಾದಿ ಸಂಪನ್ನರಿಗೆ **ಆನಂದತೀರ್ಥ** ಆನಂದಕಾರಣರಾದ ವೇದವ್ಯಾಸರೆ ಮತ್ತು ಮಧ್ವರೆ, **ಉದ್ಯತ್** ಹೊರಸೂಸುತ್ತಿರುವ **ಮಂದಸ್ಮಿತ**- ಮಂದಹಾಸದ **ಶ್ರೀ**-ಕಾಂತಿಯೂ **ಮೃದು**-ಕೋಮಲವಾದ **ಮಧು ಮಧುರ**- ಜೇನಿನಂತೆ ಸಿಹಿಯಾದ **ಆಲಾಪ**-ಮಾತೂ ಇವುಗಳ **ಪೀಯೂಷಧಾರಾ**- ಅಮೃತಧಾರೆಯ **ಪೂರ**-ಪ್ರವಾಹದ **ಆಸೇಕ**-ಸೇಚನೆಯಿಂದ **ಉಪಶಾಂತ**- ಪರಿಹಾರಗೊಂಡ **ಅಸುಖ**-ದುಃಖ ಉಳ್ಳ **ಸುಜನ** - ಸಜ್ಜನರ **ಮನೋಲೋಚನ**-ಮನಸ್ಸೆಂಬ ಕಣ್ಣುಗಳಿಂದ **ಆಪೀಯಮಾನಂ** - ಆಸೆಯಿಂದ ನೋಡಿ ಆನಂದಿಸಲ್ಪಡುವ **ಸುಂದರಂ**-ಮನೋಹರವಾದ **ಇಹ**-ಈ ಸೇವಕ ಜನರಲ್ಲಿ **ಆನಂದಂ** ಆನಂದವನ್ನು **ಮಹತ್**-ಬಹಳವಾಗಿ **ಸಂದುಹತ್**-ತುಂಬುವ **ದುರಿತ ನುತ್**-ಪಾಪ ಪರಿಹಾರಕವಾದ **ಉದಿತಂ**- ಉದಿಸುತ್ತಿರುವ **ಶ್ರೀಮತ್**-ಕಾಂತಿಯುಕ್ತವಾದ **ವಕ್ತ್ರೇಂದುಬಿಂಬಂ** - ಮುಖವೆಂಬ ಚಂದ್ರಬಿಂಬವನ್ನು **ಅಹಂ** - ನಾನು **ಕದಾ** - ಯಾವಾಗ **ನಿತ್ಯದಾ**-ಸದಾ ಕಾಲವೂ **ಸಂದ್ರಕ್ಷ್ಯೇ** - ನೋಡುವಂತಾದೀತು ?

ವೇದವ್ಯಾಸರೆ, ಮಧ್ವರೆ, ನೀವು ಜ್ಞಾನಭಕ್ತ್ಯಾದಿ ಸಂಪನ್ನರಿಗೆ ಮೋಕ್ಷದಲ್ಲಿ ಆನಂದ ಕಾರಣರು. ಉದಿಸಿ ಹೊರಸೂಸುವ ಮಂದಹಾಸದ ಕಾಂತಿ ಮತ್ತು ಜೇನಿನಂತ ಸಿಹಿಯಾದ ಕೋಮಲವಾದ ಮಾತುಗಳೆಂಬ ಅಮೃತಧಾರೆಯ ಸೇಚನೆಯಿಂದ ಸಜ್ಜನರ ಎಲ್ಲ ದುಃಖ ಪರಿಹಾರ ಮಾಡುವಂಥಹುದು, ನಿಮ್ಮ ಮುಖ. ಅವರಿಂದ ಸಜ್ಜನರು ಸದಾ ಆಸೆತುಂಬಿದ ಒಳಗಣ್ಣಿಂದ ಅದನ್ನು ಸದಾ ನೋಡಿ ಆನಂದಿಸುತ್ತಾರೆ. ಅದು ಸುಂದರವಾಗಿದ್ದು ಉಪಾಸಕರಿಗೆ ಬಹಳವಾಗಿ ಆನಂದ ಉಂಟುಮಾಡುತ್ತದೆ. ಪಾಪ ಕಳೆಯುತ್ತದೆ. ಸದಾ ಉದಿಸುವ ಚಂದ್ರಬಿಂಬದಂತಿದೆ. ಅದನ್ನು ನಾನೆಂದು ಸದಾ ಕಾಲ ನೋಡುವಂತಾದೀತು!

-೩೪-

**ಪ್ರಾಚೀನಾಚೀರ್ಣಪುಣ್ಯೋ**
**ಚ್ಚಯಚತುರತರಾಚಾರತಶ್ಚಾರುಚಿತ್ತಾನ್**
**ಅತ್ಯುಚ್ಚಾಂ ರೋಚಯಂತೀಂ**
**ಶ್ರುತಿಚಿತವಚನಾಂ ಶ್ರಾವಕಾಂಶ್ಚೋದ್ಯಚುಂಚೂನ್ ।**
**ವ್ಯಾಖ್ಯಾಮುತ್ಖಾತದುಃಖಾಂ**
**ಚಿರಮುಚಿತಮಹಾಚಾರ್ಯ ಚಿಂತಾರತಾಂಸ್ತೇ**
**ಚಿತ್ರಾಂ ಸಚ್ಛಾಸ್ತ್ರಕರ್ತ -**
**ಶ್ಚರಣಪರಿಚರಾಂಛ್ರಾವಯಾಸ್ಮಾಂಶ್ಚ ಕಿಂಚಿತ್ ॥**

**ವೇದವ್ಯಾಸರೆ, ಮಧ್ವರೆ, ನಿಮ್ಮ ಶಾಸ್ತ್ರದ ಶ್ರವಣ ನಮಗೆ ದೊರಕಲಿ.**

**ಸಚ್ಛಾಸ್ತ್ರಕರ್ತಃ**-ಸಚ್ಛಾಸ್ತ್ರಗಳನ್ನು ರಚಿಸುವ **ಉಚಿತ**-ಶಾಸ್ತ್ರ ರಚಿಸಲು ಅರ್ಹರಾದ **ಮಹಾಚಾರ್ಯ**-ಮಹಾ ಗುರುಗಳಾದ ವೇದವ್ಯಾಸರೆ, ಮಧ್ವರೆ. **ಪ್ರಾಚೀನ** - ಪೂರ್ವ ಜನ್ಮಗಳಲ್ಲಿ **ಆಚೀರ್ಣ** - ಗಳಿಸಿದ **ಪುಣ್ಯೋಚ್ಚಯ** -ಪುಣ್ಯರಾಶಿಯಿಂದ ಉಂಟಾದ **ಚತುರ ತರ**-ಅತ್ಯಂತ ಕೌಶಲ್ಯ ಪೂರ್ಣವಾದ **ಆಚಾರತಃ**-ಆಚಾರದಿಂದ **ಚಾರು**-ಸುಂದರವಾದ **ಚಿತ್ತಾನ್**-ಮನಸ್ಸುಳ್ಳ **ಚೋದ್ಯ**-ಒಳ್ಳೆಯ ಪ್ರಶ್ನೆಗಳಿಂದ **ಚುಂಚೂನ್**- ಪ್ರಸಿದ್ಧರಾದ **ಶ್ರಾವಕಾನ್ ಪ್ರತಿ**-ಶ್ರೋತೃಗಳಿಗೆ **ಚಿರಂ**-ಯಾವಾಗಲೂ **ರೋಚಯಂತೀಂ**-ಆಸಕ್ತಿ ಉಂಟು ಮಾಡುವ **ಶ್ರುತಿ**-ವೇದಗಳಿಂದ **ಚಿತ**-ಸಂಗ್ರಹಿಸಿದ **ವಚನಾಂ**-ವಚನಗಳುಳ್ಳ **ಅತ್ಯುಚ್ಚಾಂ**- ಅತಿ ಶ್ರೇಷ್ಠವಾದ **ಉತ್ಖಾತ ದುಃಖಾಂ**-ದುಃಖಪರಿಹಾರಕವಾದ **ಚಿತ್ರಾಂ**-ಆಶ್ಚರ್ಯಕರವಾದ **ವ್ಯಾಖ್ಯಾಂ**-ವ್ಯಾಖ್ಯಾನವನ್ನು **ತೇ**-ನಿಮ್ಮ **ಚಿಂತಾ ರತಾನ್**-ಧ್ಯಾನಾಸಕ್ತರಾದ **ಚರಣ ಪರಿಚರಾನ್**-ಪಾದ ಸೇವಕರಾದ **ಅಸ್ಮಾಂಶ್ಚ**-ನಮಗೂ ಕೂಡ **ಕಿಂಚಿತ್**-ಸ್ವಲ್ಪವಾದರೂ **ಶ್ರಾವಯ**-ಶ್ರವಣ ಮಾಡಿಸಿರಿ

ವೇದವ್ಯಾಸರೇ, ಮಧ್ವರೆ ನೀವು ಸಚ್ಛಾಸ್ತ್ರಗಳನ್ನು ರಚಿಸಿರುವಿರಿ, ರಚಿಸುವ ಯೋಗ್ಯತೆ ಇರುವುದು ನಿಮ್ಮಲ್ಲಿಯೇ ಏಕೆಂದರೆ ನೀವು ಲೋಕಕ್ಕೆ ಮಹಾ ಆಚಾರ್ಯರು ನಿಮ್ಮ ಗ್ರಂಥಗಳನ್ನು ಓದಲು ಚಿತ್ತಶುದ್ಧಿ ಬೇಕು ಚಿತ್ತಶುದ್ಧಿಗೆ ಕೌಶಲ್ಯ ಪೂರ್ಣವಾದ ಸದಾಚಾರ ಕಾರಣ ಮತ್ತು ಸದಾಚಾರಕ್ಕೆ ಪೂರ್ವಜನ್ಮದ ಪುಣ್ಯರಾಶಿ ಕಾರಣ ಇವೆಲ್ಲ ಇರುವವರಿಗೆ, ಒಳ್ಳೆಯ ಪ್ರಶ್ನೆ ಮಾಡಬಲ್ಲವರಿಗೆ ನಿಮ್ಮ ಗ್ರಂಥ ಆಸಕ್ತಿ ಮೂಡಿಸುತ್ತದೆ ಎಲ್ಲ ವೇದಗಳಿಂದ ಸಂಗ್ರಹಿಸಿದ ಪ್ರಮಾಣ ವಚನಗಳ ಆಧಾರ ಕೊಟ್ಟೇ ವಿಷಯ ಮಂಡನೆ ಖಂಡನೆಗಳನ್ನು ಮಾಡುವಂಥಹುದು ತಮ್ಮ ಗ್ರಂಥ ಅತ್ಯಂತ ಶ್ರೇಷ್ಠ ಪಾಪ ಪರಿಹಾರದ ಮೂಲಕವೂ ತತ್ಕಾಲದಲ್ಲಿ ಶ್ರವಣದಿಂದಲೂ ದುಃಖಪರಿಹಾರಕವಾದುದು ಪಂಡಿತ ಪಾಮರರಿಗಲ್ಲರಿಗೂ ಅಧ್ಯಯನ ಯೋಗ್ಯವಾದ ವಿಚಿತ್ರ ಶೈಲಿಯದು ನಿಮ್ಮನ್ನೆ ಧ್ಯಾನಿಸುತ್ತ ನಿಮ್ಮ ಪಾದ ಸೇವೆಗೈವ ನಮಗೂ ನಮ್ಮ ಶಕ್ತ್ಯನುಸಾರ ಸ್ವಲ್ಪವಾದರೂ ಆ ಗ್ರಂಥಗಳ ಶ್ರವಣ ಮಾಡಿಸಿರಿ

-೩೫-

**ಪೀಠೇ ರತ್ನೋಪಕ್ಲೃಪ್ತೇ**
**ರುಚಿರರುಚಿಮಣಿಜ್ಯೋತಿಷಾ ಸನ್ನಿಷಣ್ಣಂ**
**ಬ್ರಹ್ಮಾಣಂ ಭಾವಿನಂ ತ್ವಾಂ**
**ಜ್ವಲತಿ ನಿಜಪದೇ ವೈದಿಕಾದ್ಯಾ ಹಿ ವಿದ್ಯಾಃ ।**
**ಸೇವಂತೇ ಮೂರ್ತಿಮತ್ಯಃ**
**ಸುಚರಿತ ಚರಿತಂ ಭಾತಿ ಗಂಧರ್ವಗೀತಂ**
**ಪ್ರತ್ಯೇಕಂ ದೇವಸಂಸತ್ಸ್ವಪಿ**
**ತವ ಭಗವನ್ ನರ್ತಿತದ್ಯೋವಧೂಷು ॥**

**ಶ್ರೀಹರಿ, ನಿನ್ನ ಕೀರ್ತಿ ಎಲ್ಲೆಡೆ ತುಂಬಿದೆ !**

**ಸುಚರಿತ**-ಮಂಗಳಕರ ಚರಿತ್ರೆ ಉಳ್ಳ **ಭಗವನ್**-ಭಗವಂತನಾದ ಹರಿಯೆ, **ನಿಜ ಪದೇ**-ನಿನ್ನ ಧಾಮತ್ರಯದಲ್ಲಿ **ರುಚಿರ ರುಚಿ**-ಮನೋಹರ ಕಾಂತಿ ಉಳ್ಳ **ಮಣಿ**-ಮಣಿಗಳ **ಜ್ಯೋತಿಷಾ**-ಪ್ರಕಾಶದಿಂದ **ಜ್ವಲತಿ**-ಬೆಳಗುವ

**ರತ್ನೋಪಕ್ಲೃಪ್ತೇ**-ರತ್ನಖಚಿತವಾದ **ಪೀಠೇ**-ಸಿಂಹಾಸನದಲ್ಲಿ **ಸನ್ನಿಷಣ್ಣಂ**-ಮಂಡಿಸಿರುವ **ಬ್ರಹ್ಮಾಣಂ**-ಸತ್ಯಲೋಕದಲ್ಲಿ ಬ್ರಹ್ಮನೊಳಗೆ ಬ್ರಹ್ಮನಾಗಿ ಇರುವ ಮತ್ತು **ಭಾವಿನಂ ಬ್ರಹ್ಮಾಣಂ** - ಭಾವಿ ಬ್ರಹ್ಮನಾದ ಮುಖ್ಯಪ್ರಾಣನಲ್ಲಿ ಮುಖ್ಯಪ್ರಾಣನಾಗಿರುವ **ತ್ವಾಂ** - ನಿನ್ನನ್ನು **ವೈದಿಕಾದ್ಯಾ ವಿದ್ಯಾಃ** - ವೇದೇತಿಹಾಸಾದಿ ವಿದ್ಯೆಗಳ ಅಭಿಮಾನಿಗಳು **ಮೂರ್ತಿಮತ್ಯಃ** - ಮೂರ್ತಿಮತ್ತಾಗಿ ಬಂದು **ಸೇವಂತೇ**-ಸೇವಿಸುತ್ತಾರೆ **ಅಪಿ**-ಮತ್ತು **ತವ**-ನಿನ್ನ **ಚರಿತಂ** - ಚರಿತ್ರೆಯು **ನರ್ತಿತ**-ನರ್ತಿಸುವ **ದ್ಯೋವಧೂಷು**-ದೇವಲೋಕದ ಸ್ತ್ರೀಯರುಳ್ಳ **ದೇವಸಂಸತ್ಸು** - ದೇವಸಭೆಗಳಲ್ಲಿ **ಪ್ರತ್ಯೇಕಂ** - ಪ್ರತಿಯೊಂದರಲ್ಲಿಯೂ **ಗಂಧರ್ವಗೀತಂ**-ಗಂಧರ್ವರಿಂದ ಹಾಡಲ್ಪಟ್ಟು **ಭಾತಿ**-ಶೋಭಿಸುತ್ತದೆ **ಹಿ** - ಇದು ಪ್ರಸಿದ್ಧ.

ಮಂಗಳ ಚರಿತನಾದ ಭಗವಂತನೆ, ನೀನು ನಿನ್ನ ಶ್ವೇತದ್ವೀಪಾದಿ ಧಾಮಗಳಗಲ್ಲಿ ರತ್ನಖಚಿತವಾಗಿ ಶೋಭಿಸುವ ಪೀಠಗಳಲ್ಲಿ ವಿದ್ಯುಕ್ತವಾಗಿ ಕುಳಿತು ಸತ್ಯಲೋಕದಲ್ಲಿ ಬ್ರಹ್ಮನೊಳಗೆ ಬ್ರಹ್ಮನಾಗಿ ಕುಳಿತು ಮತ್ತು ಭಾವಿಬ್ರಹ್ಮನಾದ ಮುಖ್ಯಪ್ರಾಣನಲ್ಲಿ ಮುಖ್ಯಪ್ರಾಣನಾಗಿ ಕುಳಿತು ಮೂರ್ತಿಮತ್ತಾಗಿ ಬಂದ ಸಕಲ ವೇದೇತಿಹಾಸಾದಿ ಗ್ರಂಥಾಭಿಮಾನಿಗಳಾದ ದೇವತೆಗಳಿಂದಲೂ ಸೇವೆ ಕೈಗೊಳ್ಳುವಿ. ಎಲ್ಲ ದೇವಸಭೆಗಳಲ್ಲಿಯೂ ನಿನ್ನ ಚರಿತ್ರೆಗಳನ್ನು ಗಂಧರ್ವರು ಹಾಡುತ್ತಾರೆ ಅಪ್ಸರೆಯರು ಕುಣಿದು ಅಭಿನಯಿಸುತ್ತಾರೆ

**ವಾಯುದೇವ, ನಿನ್ನ ಕೀರ್ತಿ ಎಲ್ಲೆಡೆ ತುಂಬಿದೆ !**

**ಸುಚರಿತ**-ಮಂಗಳ ಚರಿತ್ರೆ ಉಳ್ಳ **ಭಗವನ್**- ಪೂಜ್ಯನಾದ ವಾಯುದೇವನೆ, **ನಿಜ ಪದೇ**- ನಿನ್ನ ಸ್ಥಾನವಾದ ಸತ್ಯಲೋಕದಲ್ಲಿ **ರುಚಿರ ರುಚಿ**-ಮನೋಹರವಾದ ಕಾಂತಿ ಉಳ್ಳ **ಮಣಿ**- ಮಣಿಗಳ **ಜ್ಯೋತಿಷಾ**-ಪ್ರಕಾಶದಿಂದ **ಜ್ವಲತಿ**-ಶೋಭಿಸುವ **ರತ್ನೋಪಕ್ಲೃಪ್ತೇ**- ರತ್ನ ಖಚಿತವಾದ **ಪೀಠೇ**- ಸಿಂಹಾಸನದಲ್ಲಿ **ಸನ್ನಿಷಣ್ಣಂ**- ಮಂಡಿಸಿರುವ **ಭಾವಿನಂ ಬ್ರಹ್ಮಾಣಂ**-ಮುಂದೆ ಬ್ರಹ್ಮನಾಗಲಿರುವ **ತ್ವಾಂ**-ನಿನ್ನನ್ನು **ವೈದಿಕಾದ್ಯಾ ವಿದ್ಯಾಃ**- ವೇದೇತಿಹಾಸಾದಿ ವಿದ್ಯೆಗಳ ಅಭಿಮಾನಿಗಳು **ಮೂರ್ತಿಮತ್ಯಃ**-ಮೂರ್ತಿಮತ್ತಾಗಿ ಬಂದು **ಸೇವಂತೇ**-ಸೇವಿಸುತ್ತಾರೆ. **ಅಪಿ**-ಮತ್ತು

**ತವ**-ನಿನ್ನ **ಚರಿತಂ**- ಚರಿತ್ರೆಯು **ನರ್ತಿತ**-ನರ್ತಿಸುವ **ದ್ಯೋ ವಧೂಷು**-ದೇವಲೋಕದ ಸ್ತ್ರೀಯರುಳ್ಳ **ದೇವಸಂಸತ್ಸು**-ದೇವಸಭೆಗಳಲ್ಲಿ **ಪ್ರತ್ಯೇಕಂ**-ಪ್ರತಿಯೊಂದರಲ್ಲಿಯೂ **ಗಂಧರ್ವಗೀತಂ**- ಗಂಧರ್ವರಿಂದ ಹಾಡಲ್ಪಟ್ಟು **ಭಾತಿ**-ಶೋಭಿಸುತ್ತದೆ **ಹಿ**-ಇದು ಪ್ರಸಿದ್ಧ.

ಪೂಜ್ಯನಾದ ಮಂಗಳ ಚರಿತನಾದ ವಾಯುದೇವನೆ, ನಿನ್ನ ಸ್ಥಾನವಾದ ಸತ್ಯಲೋಕದಲ್ಲಿ ಬ್ರಹ್ಮನು ಮಹಾರಾಜನಂತೆ ಮೆರೆವಾಗ ಭಾವಿ ಬ್ರಹ್ಮನಾದ ನೀನು ಉಜ್ಜ್ವಲ ರತ್ನ ಖಚಿತ ಸಿಂಹಾಸನದಲ್ಲಿ ಯುವರಾಜನಂತೆ ಮಂಡಿಸಿ ಮೂರ್ತಿಮತ್ತಾಗಿ ಬಂದ ಸಕಲ ವೇದೇತಿಹಾಸಾದಿ ಗ್ರಂಥಾಭಿಮಾನಿದೇವತೆಗಳಿಂದಲೂ ಸೇವೆ ಕೈಗೊಳ್ಳುವಿ ಉಳಿದ ಎಲ್ಲ ದೇವ ಸಭೆಗಳಲ್ಲಿಯೂ ನಿನ್ನ ಚರಿತ್ರೆಗಳನ್ನು ಗಂಧರ್ವರು ಹಾಡುತ್ತಾರೆ, ಅಪ್ಸರೆಯರು ಕುಣಿದು ಅಭಿನಯಿಸುತ್ತಾರೆ

-೩೬-

**ಸಾನುಕ್ರೋಶೈರಜಸ್ರಂ**
**ಜನಿಮೃತಿನಿರಯಾ ದ್ಯೂರ್ಮಿಮಾಲಾವಿಲೇಽಸ್ಮಿನ್**
**ಸಂಸಾರಾಬ್ಧೌ ನಿಮಗ್ನಾನ್**
**ಶರಣಮಶರಣಾನಿಚ್ಛತೋ ವೀಕ್ಷ್ಯ ಜಂತೂನ್ ।**
**ಯುಷ್ಮಾಭಿಃ ಪ್ರಾರ್ಥಿತಃ ಸನ್**
**ಜಲನಿಧಿಶಯನಃ ಸತ್ಯವತ್ಯಾಂ ಮಹರ್ಷೇಃ**
**ವ್ಯಕ್ತಶ್ಚಿನ್ಮಾತ್ರಮೂರ್ತಿ-**
**ರ್ನಖಲು ಭಗವತಃ ಪ್ರಾಕೃತೋ ಜಾತು ದೇಹಃ ॥**

**ವೇದವ್ಯಾಸರೆ, ನಿಮ್ಮ ಶರೀರ ಶುದ್ಧ ಚಿನ್ಮಯ !**

ವೇದವ್ಯಾಸರೆ, **ಜನಿಮೃತಿನಿರಯಾದಿ**-ಜನನ ಮರಣ ನರಕಾದಿ ರೂಪವಾದ **ಊರ್ಮಿಮಾಲಾ**-ಅಲೆಗಳ ಸಾಲುಗಳಿಂದ **ಆವಿಲೇ**-ಕದಡಿದ **ಅಸ್ಮಿನ್ ಸಂಸಾರಾಬ್ಧೌ**-ಈ ಸಂಸಾರ ಸಾಗರದಲ್ಲಿ **ಅಜಸ್ರಂ**-ಯಾವಾಗಲೂ

ನಿಮಗ್ನಾನ್-ಮುಳುಗಿದ್ದು **ಅಶರಣಾನ್**-ಅನಾಥರಾದ ಮತ್ತು **ಶರಣಂ**-ರಕ್ಷಕನನ್ನು **ಇಚ್ಛತಃ**-ಬಯಸುತ್ತಿರುವ **ಜಂತೂನ್**-ಸುಜೀವಿಗಳನ್ನು **ವೀಕ್ಷ್ಯ**-ನೋಡಿ **ಸಾನುಕ್ರೋಶೈಃ**- ಕೃಪೆಯಿಂದ ಕೂಡಿದ **ಯುಷ್ಮಾಭಿಃ**-ನಿಮ್ಮವರಾದ ಬ್ರಹ್ಮಾದಿ ದೇವತೆಗಳಿಂದ **ಪ್ರಾರ್ಥಿತಃ ಸನ್**-ಪ್ರಾರ್ಥಿತರಾಗಿ **ಜಲನಿಧಿ ಶಯನಃ**-ಸಾಗರಶಯನರಾದ ನೀವು **ಸತ್ಯವತ್ಯಾಂ**-ಸತ್ಯವತಿಯಲ್ಲಿ **ಮಹರ್ಷೇಃ**-ಪರಾಶರಮಹರ್ಷಿಯಿಂದ **ಚಿನ್ಮಾತ್ರ ಮೂರ್ತಿಃ**-ಕೇವಲಚಿನ್ಮಯ ಶರೀರ ಉಳ್ಳವರಾಗಿ **ವ್ಯಕ್ತಃ**-ಆವಿರ್ಭವಿಸಿದಿರಿ **ಭಗವತಃ**-ಷಡ್ಗುಣಪೂರ್ಣರಾದ ನಿಮಗೆ **ಜಾತು**-ಎಂದಾದರೂ **ಪ್ರಾಕೃತಃ**-ಪ್ರಕೃತಿಯಿಂದಾದ **ದೇಹಃ**-ದೇಹವು **ನ ಖಲು**-ಇಲ್ಲವೆ ಇಲ್ಲ

ವೇದವ್ಯಾಸರೆ, ಜನನ ಮರಣ ನರಕವಾಸಾದಿ ಅಲೆಗಳು ಎಡೆಬಿಡದೆ ತುಂಬಿ ಪ್ರಕ್ಷುಬ್ಧವಾಗಿರುವ ಈ ಸಂಸಾರ ಸಾಗರದಲ್ಲಿ ಸದಾ ಮುಳುಗಿದ್ದು ಅನಾಥರಾಗಿ ರಕ್ಷಕನಾರೆಂದು ಇದಿರುನೋಡುತ್ತಿರುವ ಸುಜೀವಿಗಳನ್ನು ಕಂಡು ಮರುಕಗೊಂಡ ನಿಮ್ಮವರೆ ಆದ ಬ್ರಹ್ಮಾದಿ ದೇವತೆಗಳು ನಿಮ್ಮನ್ನು ಪ್ರಾರ್ಥಿಸಿದರು ಅದರಂತೆ ಕ್ಷೀರಸಾಗರಶಾಯಿಯಾದ ನೀವು ಸತ್ಯವತಿಯಲ್ಲಿ ಪರಾಶರರಿಂದ ಶುದ್ಧ ಚಿನ್ಮಯ ಶರೀರದಿಂದಲೆ ಪ್ರಾದುರ್ಭವಿಸಿದಿರಿ ಷಡ್ಗುಣಪೂರ್ಣರಾದ ನಿಮಗೆ ಎಂದೂ ಪ್ರಕೃತಿನಿರ್ಮಿತವಾದ ಶರೀರವಿರುವುದೆ ಇಲ್ಲ

ವಾಯುದೇವ, **ಜನಿಮೃತಿನಿರಯಾದಿ**-ಜನನ ಮರಣ ನರಕವಾಸಾದಿ ರೂಪವಾದ **ಊರ್ಮಿ ಮಾಲಾ**-ಅಲೆಗಳ ಸಾಲುಗಳಿಂದ **ಆವಿಲೇ**-ಪ್ರಕ್ಷುಬ್ಧವಾದ **ಅಸ್ಮಿನ್ ಸಂಸಾರಾಬ್ಧೌ**-ಈ ಸಂಸಾರ ಸಾಗರದಲ್ಲಿ **ಅಜಸ್ರಂ**-ಯಾವಾಗಲೂ **ನಿಮಗ್ನಾನ್** - ಮುಳುಗಿದ್ದು **ಅಶರಣಾನ್** -ಅನಾಥರಾದ ಮತ್ತು **ಶರಣಂ**-ರಕ್ಷಕನನ್ನು **ಇಚ್ಛತಃ**-ಬಯಸುತ್ತಿರುವ **ಜಂತೂನ್**-ಸುಜೀವಿಗಳನ್ನು **ವೀಕ್ಷ್ಯ**-ನೋಡಿ **ಸಾನುಕ್ರೋಶೈಃ**-ಕೃಪೆಯಿಂದ ಕೂಡಿದ **ಯುಷ್ಮಾಭಿಃ**-ನಿಮ್ಮಿಂದ **ಪ್ರಾರ್ಥಿತಃ ಸನ್**-ಪ್ರಾರ್ಥಿತನಾಗಿ **ಜಲನಿಧಿ ಶಯನಃ**-ಸಾಗರಶಯನನಾದ ಹರಿ **ಸತ್ಯವತ್ಯಾಂ**-ಸತ್ಯವತಿಯಲ್ಲಿ **ಮಹರ್ಷೇಃ**-ಪರಾಶರ ಮಹರ್ಷಿಯಿಂದ **ಚಿನ್ಮಾತ್ರಮೂರ್ತಿಃ**-ಕೇವಲ

ಚಿನ್ಮಯಶರೀರಿಯಾದ ವೇದವ್ಯಾಸರಾಗಿ **ವ್ಯಕ್ತಃ**- ಆವಿರ್ಭವಿಸಿದನು **ಭಗವತಃ**-ಭಗವಂತನಿಗೆ **ಜಾತು**-ಎಂದಾದರೂ **ಪ್ರಾಕೃತಃ**-ಪ್ರಕೃತಿಯಿಂದಾದ **ದೇಹಃ**-ದೇಹವು **ನ ಖಲು**-ಇಲ್ಲವೆ ಇಲ್ಲ

ವಾಯುದೇವ, ಜನನ ಮರಣ ನರಕವಾಸಾದಿ ರೂಪವಾದ ಅಲೆಗಳ ಸಾಲುಗಳಿಂದ ಪ್ರಕ್ಷುಬ್ಧವಾದ ಈ ಸಂಸಾರಸಾಗರದಲ್ಲಿ ಸದಾ ಮುಳುಗಿದ್ದು ಅನಾಥರಾಗಿ ರಕ್ಷಕನಾರೆಂದು ಇದಿರು ನೋಡುತ್ತಿರುವ ಸುಜೀವಿಗಳನ್ನು ಕಂಡು ಮರುಕಗೊಂಡ ನೀವು ಪ್ರಾರ್ಥಿಸಿದಾಗಲೆ ನಾಗರಶಯನನಾದ ಹರಿ ಸತ್ಯವತಿಯಲ್ಲಿ ಪರಾಶರ ಮಹರ್ಷಿಗಳಿಂದ ಶುದ್ಧ ಚಿನ್ಮಯಶರೀರಿಯಾದ ವೇದವ್ಯಾಸರಾಗಿ ಆವಿರ್ಭವಿಸಿದನು ಭಗವಂತನಿಗೆ ಎಂದೂ ಪ್ರಕೃತಿ ನಿರ್ಮಿತವಾದ ಶರೀರವಿಲ್ಲವೆ ಇಲ್ಲ

-೩೭-

**ಅಸ್ತವ್ಯಸ್ತಂ ಸಮಸ್ತ -**
**ಶ್ರುತಿಗತಮಧಮೈ ರತ್ನಪೂಗಂ ಯಥಾಂಧೈಃ**
**ಅರ್ಥಂ ಲೋಕೋಪಕೃತ್ಯೈ**
**ಗುಣಗಣನಿಲಯಃ ಸೂತ್ರಯಾಮಾಸ ಕೃತ್ಸ್ನಂ ।**
**ಯೋಽಸೌ ವ್ಯಾಸಾಭಿಧಾನ-**
**ಸ್ತಮಹಮಹರಹ ರ್ಭಕ್ತಿತಸ್ತ್ವತ್ಪ್ರಸಾದಾತ್**
**ಸದ್ಯೋ ವಿದ್ಯೋಪಲಬ್ಧ್ಯೈ**
**ಗುರುತಮಮಗುರುಂ ದೇವದೇವಂ ನಮಾಮಿ ॥**

**ವೇದವ್ಯಾಸರೆ, ಸೂತ್ರಕಾರರಾದ ನಿಮಗೆ ವಂದನೆ.**

**ಗುಣಗಣನಿಲಯಃ**-ಗುಣಸಮೂಹಗಳಿಗೆ ನೆಲೆಯಾದ **ವ್ಯಾಸಾಭಿಧಾನಃ**- ವ್ಯಾಸನೆಂಬ ಹೆಸರುಳ್ಳ **ಯಃ ಅಸೌ**-ಯಾವ ಈ ಭಗವಂತನು **ಅಂಧೈಃ**-

ಕುರುಡರಿಂದ **ಅಸ್ತವ್ಯಸ್ತಂ**-ಅಸ್ತವ್ಯಸ್ತಗೊಳಿಸಲ್ಪಟ್ಟ **ರತ್ನಪೂಗಂ ಯಥಾ**- ರತ್ನ ಸಮೂಹವನ್ನು ಹೇಗೋ ಹಾಗೆ **ಅಧಮ್ಯೈಃ**-ನೀಚರಿಂದ **ಅಸ್ತವ್ಯಸ್ತಂ**-ಅಸ್ತವ್ಯಸ್ತಗೊಳಿಸಲ್ಪಟ್ಟ **ಸಮಸ್ತಶ್ರುತಿಗತಂ**-ಎಲ್ಲ ವೇದಗಳಲ್ಲಿರುವ **ಕೃತ್ಸ್ನಂ**-ಎಲ್ಲ **ಅರ್ಥಂ**-ಪ್ರಮೇಯವನ್ನು **ಲೋಕೋಪಕೃತ್ಯೈ**-ಲೋಕೋಪಕಾರಕ್ಕಾಗಿ **ಸೂತ್ರಯಾಮಾಸ**-ಬ್ರಹ್ಮಸೂತ್ರ ಗ್ರಂಥದಲ್ಲಿ ಸಂಗತವಾಗಿ ಜೋಡಿಸಿಕೊಟ್ಟನೋ **ತಂ**-ಅಂಥ **ಗುರುತಮಂ**-ಅತ್ಯುತ್ತಮ ಗುರುವಾದ **ಅಗುರುಂ**-ತನಗೆ ಒಬ್ಬ ಗುರುವಿಲ್ಲದಂಥ **ದೇವದೇವಂ**-ದೇವತೆಗಳಿಗೂ ದೇವತೆಯಾದ ನಿಮ್ಮನ್ನು **ತ್ವತ್**-ನಿಮ್ಮ **ಪ್ರಸಾದಾತ್**-ಅನುಗ್ರಹದಿಂದ **ಸದ್ಯೋವಿದ್ಯೋಪಲಬ್ಧ್ಯೈ**-ಶೀಘ್ರಜ್ಞಾನಲಾಭಕ್ಕಾಗಿ **ಅಹರಹಃ**-ಪ್ರತಿದಿನ **ಭಕ್ತಿತಃ**-ಭಕ್ತಿಯಿಂದ **ಅಹಂ**-ನಾನು **ನಮಾಮಿ**-ನಮಿಸುತ್ತೇನೆ

ವೇದವ್ಯಾಸರೆ, ಕುರುಡರು ರತ್ನಗಳನ್ನು ಅವುಗಳಲ್ಲಿರುವ ಸ್ವಭಾವ ವೈಚಿತ್ರ್ಯ ತಾರತಮ್ಯಗಳನ್ನರಿಯದೆ ಅಸ್ತವ್ಯಸ್ತವಾಗಿ ಪೋಣಿಸುವಂತೆ ಅಧಮರಾದ ವ್ಯಾಖ್ಯಾನಕಾರರು ವೇದೋಕ್ತ ಪ್ರಮೇಯಗಳನ್ನು ಅಸ್ತವ್ಯಸ್ತವಾಗಿ ಜೋಡಿಸಿದರು ಗುಣಪೂರ್ಣರಾದ ನೀವು ಸಜ್ಜನರಿಗೆ ಉಪಕಾರವಾಗಲೆಂದು ಆ ಎಲ್ಲ ಪ್ರಮೇಯಗಳನ್ನೂ ಬ್ರಹ್ಮಸೂತ್ರಗ್ರಂಥದಲ್ಲಿ ಅತ್ಯಂತ ಸುಂದರವಾಗಿ ಹಿತವಾಗಿ ಜೋಡಿಸಿಟ್ಟಿರಿ ಆ ಗ್ರಂಥದಲ್ಲಿ ಅಡಗಿದ ತತ್ವಜ್ಞಾನವನ್ನು ಶೀಘ್ರವಾಗಿ ನಿಮ್ಮ ದಯೆಯಿಂದಲೆ ಪಡೆಯುವುದಕ್ಕಾಗಿ ಸರ್ವಶ್ರೇಷ್ಠಗುರುಗಳಾದ, ತನಗೊಬ್ಬ ಗುರುವಿಲ್ಲದ ನಿಮ್ಮನ್ನು ಪ್ರತಿದಿನ ಭಕ್ತಿಯಿಂದ ನಮಿಸುತ್ತೇನೆ

**ಶ್ರೀ ಮಧ್ವರೆ,ಸೂತ್ರಕಾರರನ್ನು ಹೃದಯದಲ್ಲಿ ತುಂಬಿಕೊಂಡ ನಿಮಗೆ ವಂದನೆ**

**ಅಂಧ್ಯೈಃ**-ಕುರುಡರಿಂದ **ಅಸ್ತವ್ಯಸ್ತಂ**-ಅಸ್ತವ್ಯಸ್ತಗೊಳಿಸಲ್ಪಟ್ಟ **ರತ್ನಪೂಗಂ**-ರತ್ನ ಸಮೂಹವನ್ನು **ಯಥಾ**-ಹೇಗೋ ಹಾಗೆ **ಅಧಮ್ಯೈಃ**-ನೀಚರಿಂದ **ಅಸ್ತವ್ಯಸ್ತಂ**-ಅಸ್ತವ್ಯಸ್ತಗೊಳಿಸಲ್ಪಟ್ಟ **ಸಮಸ್ತ ಶ್ರುತಿ ಗತಂ**- ಎಲ್ಲಾ ವೇದಗಳಲ್ಲಿರುವ **ಕೃತ್ಸ್ನಂ**-ಎಲ್ಲ **ಅರ್ಥಂ**-ಪ್ರಮೇಯವನ್ನು

**ಲೋಕೋಪಕೃತ್ಯೈ**-ಲೋಕೋಪಕಾರಕ್ಕಾಗಿ **ಗುಣಗಣನಿಲಯಃ**-ಗುಣಸಮೂಹಗಳಿಗೆ ನೆಲೆಯಾದ **ವ್ಯಾಸಾಭಿಧಾನಃ**-ವ್ಯಾಸರೆಂಬ ಹೆಸರಿನ **ಯಃ**-ಯಾವ ಭಗವಂತನು **ಸೂತ್ರಯಾಮಾಸ**-ಬ್ರಹ್ಮಸೂತ್ರ ಗ್ರಂಥದಲ್ಲಿ ಸಂಗತವಾಗಿ ಜೋಡಿಸಿಕೊಟ್ಟನೋ **ಸಃ**-ಆ ಭಗವಂತನು **ಅಸೌ**-ಮುಖ್ಯಪ್ರಾಣನಾದ ನಿನ್ನಲ್ಲಿರುವನು **ತಂ**-ಅಂಥ **ಗುರುತಮಂ**-ಜೀವರಲ್ಲೆಲ್ಲ ಅತ್ಯುತ್ತಮ ಗುರುವಾದ **ಅಗುರುಂ**-ಪರಮಾತ್ಮನೊಬ್ಬನೆ ಗುರುವಾಗಿ ಉಳ್ಳ **ದೇವದೇವಂ**-ದೇವತೆಗಳಿಗೂ ದೇವತೆಯಾದ ನಿನ್ನನ್ನು **ತ್ವತ್**-ನಿನ್ನ **ಪ್ರಸಾದಾತ್**-ಅನುಗ್ರಹದಿಂದ **ಸದ್ಯೋವಿದ್ಯೋಪಲಬ್ಧ್ಯೈ**-ಶೀಘ್ರ ತತ್ವಜ್ಞಾನಲಾಭಕ್ಕಾಗಿ **ಅಹರಹಃ**-ಪ್ರತಿದಿನ **ಭಕ್ತಿತಃ**-ಭಕ್ತಿಯಿಂದ **ಅಹಂ**-ನಾನು **ನಮಾಮಿ**-ನಮಿಸುತ್ತೇನೆ

ಶ್ರೀ ಮಧ್ವರೆ, ಕುರುಡರು ರತ್ನಗಳನ್ನು ಅವಗಳಲ್ಲಿರುವ ಸ್ವಭಾವ ವೈಚಿತ್ರ್ಯ ತಾರತಮ್ಯಗಳನ್ನರಿಯದೆ ಅಸ್ತವ್ಯಸ್ತವಾಗಿ ಪೋಣಿಸುವಂತೆ ಅಧಮರಾದ ವ್ಯಾಖ್ಯಾನಕಾರರು ವೇದೋಕ್ತ ಪ್ರಮೇಯಗಳನ್ನು ಅಸ್ತವ್ಯಸ್ತವಾಗಿ ಜೋಡಿಸಿದರು ಗುಣಪೂರ್ಣನಾದ ಶ್ರೀಹರಿ ಸಜ್ಜನರಿಗೆ ಉಪಕಾರವಾಗಲೆಂದು ಆ ಎಲ್ಲ ಪ್ರಮೇಯಗಳನ್ನು ಬ್ರಹ್ಮಸೂತ್ರ ಗ್ರಂಥಗಳಲ್ಲಿ ಅತ್ಯಂತ ಸುಂದರವಾಗಿ ಹಿತವಾಗಿ ಜೋಡಿಸಿ ಕೊಟ್ಟನು ಸೂತ್ರಕಾರರಾದ ವೇದವ್ಯಾಸರೂಪಿಯಾದ ಆ ಹರಿ ನಿಮ್ಮ ಹೃದಯದಲ್ಲಿಯೆ ವಾಸವಾಗಿದ್ದಾನೆ ಆದ್ದರಿಂದ ನಿಮ್ಮನ್ನು, ನಿಮ್ಮ ಅನುಗ್ರಹದಿಂದ ಬೇಗನೆ ತತ್ವಜ್ಞಾನ ಲಭಿಸಲೆಂಬ ಉದ್ದೇಶದಿಂದ, ಪ್ರತಿ ದಿನ ಭಕ್ತಿಯಿಂದ ನಮಿಸುತ್ತೇನೆ ನೀವು ಜೀವರಲ್ಲೆಲ್ಲ ಅತ್ಯುತ್ತಮ ಗುರುಗಳು ನಿಮಗೆ ಪರಮಾತ್ಮನೊಬ್ಬನೆ ಗುರು ಎಲ್ಲ ದೇವತೆಗಳಿಗೂ ದೇವತೆ ಎನಿಸಿದವರು ನೀವು ಆದ್ದರಿಂದ ನಿಮ್ಮನ್ನೆ ನಮಿಸುತ್ತೇನೆ

– ೩೯ –

**ಆಜ್ಞಾಮನ್ಯೈರಧಾರ್ಯಾಂ**
**ಶಿರಸಿ ಪರಿಸರದ್ರಶ್ಮಿಕೋಟೀರಕೋಟೌ**

**ಕೃಷ್ಣಸ್ಯಾಕ್ಲಿಷ್ಟಕರ್ಮಾ**
**ದಧದನುಸರಣಾದರ್ಥಿತೋ ದೇವಸಂಘೈಃ ।**
**ಭೂಮಾವಾಗತ್ಯ ಭೂಮನ್**
**ಅಸುಕರಮಕರೋಬ್ರ್ರಹ್ಮಸೂತ್ರಸ್ಯ ಭಾಷ್ಯಂ**
**ದುರ್ಭಾಷ್ಯಂ ವ್ಯಸ್ಯ ದಸ್ಯೋ-**
**ರ್ಮಣಿಮತ ಉದಿತಂ ವೇದಸದ್ಯುಕ್ತಿಭಿಸ್ತ್ವಂ ॥**

**ಶ್ರೀಹರಿ, ವಾಯುದೇವನಿಗೆ ನೀನು ಗುರುತರವಾದ ಆಜ್ಞೆ ಮಾಡಿದೆ !**

**ದಧತ್**-ಲೋಕದ ಧಾರಣಪೋಷಣ ಮಾಡುವ **ಭೂಮನ್**-ಗುಣಪೂರ್ಣನಾದ ಶ್ರೀಹರಿಯೆ, **ಭೂಮೌ**-ಭೂಮಿಯಲ್ಲಿ **ಆಗತ್ಯ**-ಅವತರಿಸಿ **ದಸ್ಯೋಃ**-ಪ್ರಪಂಚದ ಅಸ್ತಿತ್ವವನ್ನೆ ದರೋಡೆ ಮಾಡುವ **ಮಣಿಮತಃ**-ಮಣಿಮಂತನಿಂದ **ಉದಿತಂ**-ಹುಟ್ಟಿ ಬಂದ **ದುರ್ಭಾಷ್ಯಂ**-ಕೆಟ್ಟ ಭಾಷ್ಯವನ್ನು **ವೇದಸದ್ಯುಕ್ತಿಭಿಃ**-ವೇದ ವಚನಗಳಿಂದ ಮತ್ತು ನಿರ್ದುಷ್ಟ ಯುಕ್ತಿಗಳಿಂದ **ವ್ಯಸ್ಯ**-ಖಂಡಿಸಿ **ಅಸುಕರಂ**-ಮಾಡಲು ಕಷ್ಟಸಾಧ್ಯವಾದ **ಬ್ರಹ್ಮ ಸೂತ್ರಸ್ಯ ಭಾಷ್ಯಂ**-ಬ್ರಹ್ಮಸೂತ್ರ ಭಾಷ್ಯವನ್ನು ಕುರಿತು **ದೇವಸಂಘೈಃ**-ದೇವ ಸಮೂಹಗಳಿಂದ **ಅನುಸರಣಾತ್**-ಹಿಂದೆ ಹಿಂದೆ ನಡೆದು ಬರುತ್ತ **ಅರ್ಥಿತಃ**-ಪ್ರಾರ್ಥಿತನಾದ **ಅಕ್ಲಿಷ್ಟ ಕರ್ಮಾ**-ಅನಾಯಾಸವಾಗಿ ಎಲ್ಲ ಕಾರ್ಯ ಮಾಡಬಲ್ಲ **ತ್ವಂ**-ನೀನು **ಪರಿಸರದ್ ರಶ್ಮಿ**-ಕಾಂತಿಯನ್ನು ಸುತ್ತ ಚೆಲ್ಲುವ **ಕೋಟೀರ ಕೋಟೌ**-ಕಿರೀಟದ ತುದಿ ಉಳ್ಳ ಶಿರಸಿ-ತಲೆಯಲ್ಲಿ **ಅನ್ಯೈಃ**-ಬೇರೆ ರುದ್ರಾದಿ ದೇವತೆಗಳಿಂದ **ಅಧಾರ್ಯಾಂ**-ಧರಿಸಲಾಗದ **ಆಜ್ಞಾಂ**-ಆಜ್ಞೆಯನ್ನು **ಕೃಷ್ಣಸ್ಯ**-ಕೃಷ್ಣಭಕ್ತನಾದ ವಾಯುದೇವನಿಗೆ **ಅಕರೋಃ**-ಮಾಡಿದೆ

ಶ್ರೀಹರಿ ನೀನು ಲೋಕದ ಧಾರಣ ಪೋಷಣ ಮಾಡುವವನು ಅದಕ್ಕೆ ಬೇಕಾಗುವ ಸರ್ವಜ್ಞತ್ವ ಸರ್ವಶಕ್ತಿ ಮುಂತಾದ ಗುಣಗಳಿಂದ ಪೂರ್ಣನು ಆದ್ದರಿಂದ ದೇವತೆಗಳು ನಿನ್ನ ಬೆನ್ನು ಬಿಡದೆ ಹಿಂಬಾಲಿಸಿ ಬಂದು ಪ್ರಾರ್ಥನೆ ಮಾಡಿದರು, 'ದೇವ ಭೂಮಿಯಲ್ಲಿ ಅವತಾರ ಮಾಡಿ, ಮಣಿಮಂತನ ದುರ್ಭಾಷ್ಯವನ್ನು ವೇದ ವಚನಗಳ ಮತ್ತು ನಿರ್ದುಷ್ಟ ಯುಕ್ತಿಗಳ ಆಧಾರದಿಂದ ಖಂಡಿಸಿ ಒಳ್ಳೆಯ ಬ್ರಹ್ಮಸೂತ್ರ ಭಾಷ್ಯ ಒಂದನ್ನು ರಚಿಸುವುದು

ಅಸಮರ್ಥರಾದ ನಮಗೆ ಸುಲಭ ಸಾಧ್ಯವಲ್ಲ ಆದರೆ ಅದು ನಮಗೆ ಬೇಕು,' ಎಂದು ನೀನು ಅನಾಯಾಸವಾಗಿ ತಾನೆ ಎಲ್ಲ ಕಾರ್ಯ ಮಾಡಬಲ್ಲವನಾದರೂ ಕಲಿಯುಗದಲ್ಲಿ ಅವತಾರ ಮಾಡಲೊಲ್ಲದವನಾದ್ದರಿಂದ ದ್ವಾಪರದಲ್ಲಿ ಕೃಷ್ಣನ ಸೇವೆ ಮಾಡಿದ್ದ ಭೀಮನಿಗೇ ಬೇರೆ ದೇವತೆಗಳಿಂದ ಶಿರಸಾ ವಹಿಸಲಾಗದಂಥ ಗುರುತರವಾದ ಆಜ್ಞೆ ಮಾಡಿದಿ 'ಭೂಮಿಯಲ್ಲಿ ಅವತರಿಸು, ದುರ್ಭಾಷ್ಯ ಖಂಡಿಸು, ಒಳ್ಳೆಯ ಭಾಷ್ಯ ರಚಿಸು' ಎಂದು

**ವಾಯುದೇವ, ಶ್ರೀಹರಿಯಾಜ್ಞೆಯನ್ನು ನೀನು ಶಿರಸಾ ವಹಿಸಿದೆ !**

**ಭೂಮನ್**-ಗುಣಪೂರ್ಣನಾದ ವಾಯುದೇವನೆ, **ಅಕ್ಲಿಷ್ಟಕರ್ಮಾ**-ಅನಾಯಾಸವಾಗಿ ಕಾರ್ಯಮಾಡುವ **ತ್ವಂ**-ನೀನು **ಅನ್ಯೈಃ**-ಬೇರೆ ರುದ್ರಾದಿ ದೇವತೆಗಳಿಂದ **ಅಧಾರ್ಯಾಂ**-ಧರಿಸಲಾಗದ **ಕೃಷ್ಣಸ್ಯ**-ಶ್ರೀಹರಿಯ **ಆಜ್ಞಾಂ**-ಆಜ್ಞೆಯನ್ನು **ಪರಿಸರದ್ ರಶ್ಮಿ**-ಕಾಂತಿಯನ್ನು ಸುತ್ತ ಚೆಲ್ಲುವ **ಕೋಟೀರ ಕೋಟೌ**- ಕಿರೀಟದ ತುದಿ ಉಳ್ಳ **ಶಿರಸಿ**-ತಲೆಯಲ್ಲಿ **ದಧತ್**-ಧರಿಸಿ **ದೇವ ಸಂಘೈಃ**- ದೇವತೆಗಳ ಸಮೂಹದದಿಂದ **ಅನುಸರಣಾತ್**-ಹಿಂದೆ ಹಿಂದೆ ನಡೆದು ಬರುತ್ತ **ಅರ್ಥಿತಃ**-ಪ್ರಾರ್ಥಿತನಾಗಿ **ಭೂಮೌ**-ಭೂಮಿಯಲ್ಲಿ **ಆಗತ್ಯ**-ಅವತರಿಸಿ **ವೇದ ಸದ್ಯುಕ್ತಿಭಿಃ**-ವೇದವಚನ ಮತ್ತು ನಿರ್ದುಷ್ಟ ಯುಕ್ತಿಗಳಿಂದ **ದಸ್ಯೋಃ**-ಪ್ರಪಂಚದ ಅಸ್ತಿತ್ವವನ್ನು ದರೋಡೆಗೈವ **ಮಣಿಮತಃ**- ಮಣಿಮಂತನಿಂದ **ಉದಿತಂ**-ಹುಟ್ಟಿ ಬಂದ **ದುರ್ಭಾಷ್ಯಂ**-ಕೆಟ್ಟ ಭಾಷ್ಯವನ್ನು **ವ್ಯಸ್ಯ**-ನಿರಾಸಮಾಡಿ **ಅಸುಕರಂ**-ಕಷ್ಟಸಾಧ್ಯವಾದ **ಬ್ರಹ್ಮಸೂತ್ರಸ್ಯ**- ಬ್ರಹ್ಮಸೂತ್ರದ **ಭಾಷ್ಯಂ**-ಭಾಷ್ಯವನ್ನು **ಅಕರೋಃ**-ಮಾಡಿದೆ

ವಾಯುದೇವ, ನೀನು ಸರ್ವಜ್ಞತ್ವಾದಿ ಗುಣಪೂರ್ಣ ಅನಾಯಾಸವಾಗಿ ಎಲ್ಲ ಕಾರ್ಯ ಸಾಧಿಸುವವನು ಆದ್ದರಿಂದ ಅನ್ಯರಿಗೆ ಶಿರಸಾ ವಹಿಸಲಸಾಧ್ಯವಾದ ಆಜ್ಞೆಯನ್ನು ಶ್ರೀಹರಿ ನಿನಗ ಮಾಡಿದನು ದೇವತೆಗಳೂ ನಿನ್ನನ್ನು ಬೆನ್ನು ಬಿಡದೆ ಹಿಂಬಾಲಿಸಿ ಬಂದು ಪ್ರಾರ್ಥನೆ ಮಾಡಿದರು ನೀನು ಹರಿಯಾಜ್ಞೆಯನ್ನು ಶಿರಸಾ ವಹಿಸಿ ದೇವತೆಗಳ ಪ್ರಾರ್ಥನೆಯನ್ನೂ ಮನ್ನಿಸಿ ಭೂಮಿಯಲ್ಲಿ ಅವತರಿಸಿದೆ ಮಣಿಮಂತನಿಂದ ಹುಟ್ಟಿಬಂದ ಕೆಟ್ಟ ಭಾಷ್ಯವನ್ನು ವೇದವಚನಗಳಿಂದಲೂ

ಸದ್ಯುಕ್ತಿಗಳಿಂದಲೂ ಖಂಡಿಸಿ ಉತ್ತಮವಾದ ಮತ್ತು ಕಷ್ಟಸಾಧ್ಯವಾದ ಬ್ರಹ್ಮಸೂತ್ರ ಬಾಷ್ಯವನ್ನು ರಚಿಸಿದೆ

-೩೯-

**ಭೂತ್ವಾ ಕ್ಷೇತ್ರೇ ವಿಶುದ್ಧೇ**
**ದ್ವಿಜಗಣನಿಲಯೇ ರೂಪ್ಯಪೀಠಾಭಿಧಾನೇ**
**ತತ್ರಾಪಿ ಬ್ರಹ್ಮಜಾತಿ-**
**ಸ್ತ್ರಿಭುವನವಿಶದೇಮಧ್ಯಗೇಹಾಖ್ಯಗೇಹೇ ।**
**ಪಾರಿವ್ರಾಜ್ಯಾಧಿರಾಜಃ**
**ಪುನರಪಿ ಬದರೀಂ ಪ್ರಾಪ್ಯ ಕೃಷ್ಣಂ ಚ ನತ್ವಾ**
**ಕೃತ್ವಾ ಭಾಷ್ಯಾಣಿ ಸಮ್ಯಗ್**
**ವ್ಯತನುತ ಚ ಭವಾನ್ ಭಾರತಾರ್ಥ ಪ್ರಕಾಶಂ ॥**

**ವೇದವ್ಯಾಸರೆ, ನೀವು ಪುರಾಣ ಭಾರತಗಳನ್ನು ರಚಿಸಿದಿರಿ !**

**ವಿಶುದ್ಧೇ**-ಪರಿಶುದ್ಧವಾದ **ದ್ವಿಜಗಣನಿಲಯೇ**-ಹಕ್ಕಿಗಳ ಸಮೂಹಕ್ಕೆ ನೆಲೆಯಾದ **ಕ್ಷೇತ್ರೇ**-ಯಮುನಾ ದ್ವೀಪ ಕ್ಷೇತ್ರದಲ್ಲಿ **ತತ್ರಾಪಿ**-ಅದರಲ್ಲಿಯೂ **ರೂಪ್ಯ**-ಸೌಂದರ್ಯಕ್ಕೆ **ಪೀಠ**-ಆಶ್ರಯವೆಂದು **ಅಭಿದಾನೇ**-ವರ್ಣನೆಗೆ ಪಾತ್ರಳಾದ **ತ್ರಿಭುವನ**-ಮೂರೋಕದಲ್ಲಿ **ವಿಶದೇ**-ಪ್ರಸಿದ್ಧಳಾದ **ಮಧ್ಯಗ**-ಎಲ್ಲರ ಹೃದಯದ ಮಧ್ಯದಲ್ಲಿರುವ ನಿನ್ನಲ್ಲಿ **ಈಹಾ**-ಮನಸಾಗಿ ಅವತರಿಸಬೇಕೆಂಬ ಬಯಕೆ ಉಳ್ಳವಳೆಂದು **ಆಖ್ಯ**-ಪ್ರಸಿದ್ಧಿ ಉಳ್ಳ **ಗೇಹೇ**-ಪರಾಶರರ ಪತ್ನಿಯಾದ ಸತ್ಯವತಿಯಲ್ಲಿ **ಬ್ರಹ್ಮಜಾತಿಃ**-ಬ್ರಾಹ್ಮಣ ಜಾತಿಯವರಾಗಿ **ಭೂತ್ವಾ**-ಅವತರಿಸಿ **ಪುನರಪಿ**-ಇನ್ನೊಮ್ಮೆ **ಬದರೀಂ ಪ್ರಾಪ್ಯ**-ಬದರಿಗೆ ಹೋಗಿ **ಪಾರಿವ್ರಾಜ್ಯ**-ಯತಿಸಮುದಾಯಕ್ಕೆ **ಅಧಿರಾಜಃ**-ಒಡೆಯರಾಗಿ **ಕೃಷ್ಣಂ**-ನಾರಾಯಣನನ್ನು **ನತ್ವಾ**-ಶಿಷ್ಯ ಶಿಕ್ಷಾರ್ಥವಾಗಿ ಗ್ರಂಥಾದ್ಯಂತಗಳಲ್ಲಿ ನಮಿಸಿ **ಭಾಷ್ಯಾಣಿ ಚ**-ವೇದವ್ಯಾಖ್ಯಾನ ರೂಪವಾದ ಸಾತ್ವಿಕ ಪುರಾಣಗಳನ್ನೂ **ಕೃತ್ವಾ**-ಮಾಡಿ **ಭಾರತ**-ಭಾರತವೆಂಬ **ಅರ್ಥ ಪ್ರಕಾಶಂ ಚ**-ವೇದೋಕ್ತ ತದನುಕ್ತ ಸಕಲ ಪ್ರಮೇಯ ಪ್ರಕಾಶಕವಾದ

ಗ್ರಂಥವನ್ನೂ ಕೂಡ **ಭವಾನ್**-ನೀವು **ಸಮ್ಯಕ್**-ಚೆನ್ನಾಗಿ **ವ್ಯತನುತ**-ಮಾಡಿದಿರಿ

ವೇದವ್ಯಾಸರೆ, ಯಮುನಾದ್ವೀಪ ಪರಿಶುದ್ಧವಾದ ಕ್ಷೇತ್ರ ಹಕ್ಕಿಗಳ ಸಮೂಹಕ್ಕೆ ನೆಲೆಯಾದುದು ಅಲ್ಲಿ ಸೌಂದರ್ಯಕ್ಕೆ ನೆಲೆಯೆನಿಸಿದವಳೆಂದು ವರ್ಣನೆಗೆ ಪಾತ್ರಳಾದ ಮೂಲೋಕದಲ್ಲಿ ಪ್ರಸಿದ್ಧಳಾದ ಸತ್ಯವತಿಯಲ್ಲಿ ನೀವು ಅವತರಿಸಿದಿರಿ ಏಕೆಂದರೆ ಅವಳು ಸರ್ವರ ಹೃದಯದ ಮಧ್ಯದಲ್ಲಿ ನಿಯಾಮಕರಾಗಿರುವ ನೀವೆ ತನ್ನ ಮಗನಾಗಿ ಅವತರಿಸಬೇಕೆಂಬ ಬಯಕೆ ಉಳ್ಳವಳೆಂದು ಪ್ರಸಿದ್ಧಳಾದವಳು, ಬ್ರಾಹ್ಮಣರಾದ ಪರಾಶರರ ಪತ್ನಿ ಆದ್ದರಿಂದ ಅವಳಲ್ಲಿ ಬ್ರಾಹ್ಮಣ ಜಾತಿಯವರಾಗಿ ಕೌಪೀನ ಯಜ್ಞೋಪವೀತ ದಾರಿಯಾಗಿಯೆ ಅವತರಿಸಿದಿರಿ ಮೇರುಪರ್ವತದಲ್ಲಿರುವ ಬದರಿಗೆ ಹೋಗಿ ದೇವತೆಗಳಿಗೆ ವೇದಗಳನ್ನು ಉಪದೇಶಿಸಿ, ಗಂಧಮಾದನದ ಬದರಿಗೂ ಹೋಗಿ ಋಷಿಗಳಿಗೆ ಉಪದೇಶಿಸಿ, ಪುನಃ, ಹಿಮಾಲಯದ ಬದರಿಗೂ ಹೋಗಿ ಅಲ್ಲಿ ಯತಿಗಳ ಸಮುದಾಯಕ್ಕೆ ಒಡೆಯರಾಗಿ ಅವರಿಗೂ ಉಪದೇಶಿಸಿದಿರಿ ಶಿಷ್ಯ ಶಿಕ್ಷಾರ್ಥವಾಗಿ ಗ್ರಂದಾದ್ಯಂತಗಳಲ್ಲಿ ನಾರಾಯಣ ನಮಸ್ಕಾರ ಮಾಡಿ ವೇದವ್ಯಾಖ್ಯಾನ ರೂಪವಾದ ಪೂರಾಣಗಳನ್ನೂ ವೇದೋಕ್ತ ತದನುಕ್ತ ಸಕಲ ಪ್ರಮೇಯ ಪ್ರಕಾಶಕವಾದ ಮಹಾಭಾರತವನ್ನೂ ರಚಿಸಿದಿರಿ

**ಮಧ್ವರೆ, ನೀವು ಭಾಷ್ಯಗಳನ್ನೂ ಮಹಾಭಾರತ ತಾತ್ಪರ್ಯ-ನಿರ್ಣಯವನ್ನೂ ರಚಿಸಿದಿರಿ.**

**ವಿಶುದ್ಧೇ**-ಪರಿಶುದ್ಧವಾದ **ದ್ವಿಜಗಣ ನಿಲಯೇ**-'ಬ್ರಾಹ್ಮಣ ಸಮೂಹಕ್ಕೆ ನೆಲೆಯಾದ **ತ್ರಿಭುವನ ವಿಶದೇ**-ಮೂಲೋಕ ಪ್ರಸಿದ್ಧವಾದ **ರೌಪ್ಯಪೀಠ**-ರಜತಪೀಠವೆಂಬ **ಅಭಿಧಾನೇ**-ಹೆಸರುಳ್ಳ **ಕ್ಷೇತ್ರೇ**-ಕ್ಷೇತ್ರದಲ್ಲಿ **ತತ್ರಾಪಿ**-ಅದರಲ್ಲಿಯೂ **ಮಧ್ಯಗೇಹಾಖ್ಯ**-ಮಧ್ಯಗೇಹ ಎಂಬ ಹೆಸರಿನ **ಗೇಹೇ**-ಮನೆತನದಲ್ಲಿ **ಬ್ರಹ್ಮಜಾತಿಃ**-ಬ್ರಾಹ್ಮಣಜಾತಿಯವರಾಗಿ **ಭೂತ್ವಾ**-ಅವತರಿಸಿ **ಬದರೀಂ ಪ್ರಾಪ್ಯ**-ವಟುವಾಗಿ ಬದರಿಗೆ ಹೋಗಿ **ಪಾರಿವ್ರಾಜ್ಯಾಧಿರಾಜಃ**-ಸನ್ಯಾಸಾಶ್ರಮಕ್ಕೆ ಅಧಿಪತಿಗಳಾಗಿ **ಪುನರಪಿ**-ಇನ್ನೊಮ್ಮೆ **ಬದರೀಂ ಪ್ರಾಪ್ಯ**-ಬದರಿಗೆ ಹೋಗಿ **ಕೃಷ್ಣಂ ಚ**-ವೇದವ್ಯಾಸರನ್ನೂ ನಾರಾಯಣನನ್ನೂ

**ನತ್ವಾ**-ನಮಿಸಿ **ಸಮ್ಯಕ್**-ಚೆನ್ನಾಗಿ **ಭಾಷ್ಯಾಣಿ**-ಬ್ರಹ್ಮಸೂತ್ರ ಉಪನಿಷತ್ತುಗಳಿಗೆ ಭಾಷ್ಯಗಳನ್ನು **ಕೃತ್ವಾ**-ಮಾಡಿ **ಭವಾನ್**-ನೀವು **ಭಾರತ**-ಭಾರತದ **ಅರ್ಥ ಪ್ರಕಾಶಂ ಚ**-ಅರ್ಥವನ್ನು ತೋರಿಸುವ ಮಹಾಭಾರತ ತಾತ್ಪರ್ಯ ನಿರ್ಣಯವನ್ನೂ **ವ್ಯತನುತ**-ಮಾಡಿದಿರಿ

ಮಧ್ವರೆ, ನೀವು ಪರಿಶುದ್ಧವಾದ, ಬ್ರಾಹ್ಮಣ ಸಮುದಾಯಕ್ಕೆ ನೆಲೆಯಾದ, ಮೂಲೋಕ ಪ್ರಸಿದ್ಧವಾದ ರಜತಪೀಠವೆಂಬ ಹೆಸರಿನ ಕ್ಷೇತ್ರದಲ್ಲಿ, ಅದರಲ್ಲಿಯೂ ಮಧ್ಯಗೇಹವೆಂಬ ಮನೆತನದಲ್ಲಿ ಬ್ರಾಹ್ಮಣ ಜಾತಿಯವರಾಗಿ ಅವತರಿಸಿದಿರಿ ಬಾಲ್ಯದಲ್ಲಿ ವಟುವಾಗಿದ್ದಾಗಲೆ ಒಮ್ಮೆ ಬದರಿಗೆ ಹೋಗಿ ವೇದವ್ಯಾಸರಲ್ಲಿ ಸಮಸ್ತ ಶಾಸ್ತ್ರಾಭ್ಯಾಸ ಮಾಡಿ ಸಂನ್ಯಾಸ ಸ್ವೀಕರಿಸಿದ ಬಳಿಕವೂ ಇನ್ನೊಮ್ಮೆ ಬದರಿಗೆ ಹೋಗಿ, ವೇದವ್ಯಾಸರನ್ನು ಕಂಡು ನಮಿಸಿ ಅಪ್ಪಣೆ ಪಡೆದು ಬಂದು, ಬ್ರಹ್ಮಸೂತ್ರ ಉಪನಿಷತ್ತುಗಳಿಗೆ ಭಾಷ್ಯಗಳನ್ನೂ ಮಹಾಭಾರತಕ್ಕೆ ಅದರ ನಿಜವಾದ ಅರ್ಥವನ್ನು ಬೆಳಕಿಗೆ ತರಬಲ್ಲ ತಾತ್ಪರ್ಯ ನಿರ್ಣಯವನ್ನೂ ಚೆನ್ನಾಗಿ ರಚಿಸಿದಿರಿ

(ಮಧ್ವರು ವಟುವಾಗಿದ್ದಾಗಲೆ ಬದರಿಗೆ ಹೋಗಿ ವೇದವ್ಯಾಸರಲ್ಲಿ ಅಧ್ಯಯನ ಮಾಡಿದುದರ ಉಲ್ಲೇಖ ವೆಂಕಟೇಶಮಹಾತ್ಮೆಯಲ್ಲಿ ಇದೆ)

-೪೦-

**ವಂದೇ ತಂ ತ್ವಾ ಸುಪೂರ್ಣ**
**ಪ್ರಮತಿಮನುದಿನಾಸೇವಿತಂ ದೇವವೃಂದೈ -**
**ರ್ವಂದೇ ವಂದಾರುಮೀಶೇ**
**ಶ್ರಿಯ ಉತ ನಿಯತಂ ಶ್ರೀಮದಾನಂದತೀರ್ಥಂ ।**
**ವಂದೇ ಮಂದಾಕಿನೀಸತ್**
**ಸರಿದಮಲಜಲಾಸೇಕಸಾಧಿಕ್ಯಸಂಗಂ**
**ವಂದೇಽಹಂ ದೇವ ಭಕ್ತ್ಯಾ**
**ಭವಭಯದಹನಂ ಸಜ್ಜನಾನ್ ಮೋದಯಂತಂ ॥**

## ರಾಮ ಕೃಷ್ಣ ವೇದವ್ಯಾಸಾತ್ಮಕನೆ ನಿನಗೆ ನಮೋ ನಮಃ !

**ದೇವ**-ದೇವನಾದ ಶ್ರೀಹರಿಯೆ, **ಅಹಂ**-ನಾನು **ಸುಪೂರ್ಣ ಪ್ರಮತಿಂ**-ಅತ್ಯಂತ ಪೂರ್ಣವಾದ ಯದಾರ್ದಜ್ಞಾನಉಳ್ಳ, ಆದ್ದರಿಂದಲೆ **ದೇವ ವೃಂದ್ಯೈಃ**-ದೇವ ಸಮೂಹಗಳಿಂದ **ಅನುದಿನ**-ಪ್ರತಿದಿನವೂ **ಆಸೇವಿತಂ**-ಚೆನ್ನಾಗಿ ಸೇವಿಸಲ್ಪಡುವ **ತಂ**-ಪ್ರಸಿದ್ಧನಾದ **ತ್ವಾ**-ನಿನ್ನನ್ನು **ವಂದೇ**- ನಮಸ್ಕರಿಸುತ್ತೇನೆ **ಈಶೇ**-ಶಿವನಲ್ಲಿ **ವಂದಾರುಂ**-ನಮಸ್ಕಾರ ಮಾಡುವ ಅದರಿಂದಲೆ **ಶ್ರೀಮತ್**-ಜ್ಞಾನಭಕ್ತ್ಯಾದಿ ಸಂಪತ್ತುಳ್ಳವರಿಗೆ ಮಾತ್ರ **ಆನಂದ**-ಮೋಕ್ಷಾನಂದಕ್ಕೆ **ತೀರ್ಥಂ**-ಕಾರಣನಾದ **ತಂ**-ಆ ರಾಮಕೃಷ್ಣವೇದವ್ಯಾಸ ರೂಪನಾದ **ತ್ವಾ**-ನಿನ್ನನ್ನು **ವಂದೇ**-ವಂದಿಸುತ್ತೇನೆ **ಉತ**-ಮತ್ತು **ಶ್ರಿಯೇ**-ವೇದಾಭಿಮಾನಿನಿಯಾದ ಲಕ್ಷ್ಮೀದೇವಿಗೂ **ನಿಯತಂ**-ತಪ್ಪದೆ **ವಂದೇ**-ನಮಿಸುತ್ತೇನೆ **ಮಂದಾಕಿನೀ**-ಗಂಗೆ ಎಂಬ **ಸತ್ ಸರಿದ್**-ಉತ್ತಮ ನದಿಯ **ಅಮಲ**-ನಿರ್ಮಲವಾದ **ಜಲ**-ನೀರಿನ **ಆಸೇಕ**-ಸೇಚನಕ್ಕಿಂತ **ಸಾಧಿಕ್ಯ**-ಹೆಚ್ಚು ಪುಣ್ಯ ಕರವಾದ **ಸಂಗಂ**-ಶಾಸ್ತ್ರಾಧ್ಯಯನ ರೂಪ ಸಂಗವುಳ್ಳ **ಭವ ಭಯ**-ಸಂಸಾರ ಭಯವನ್ನು **ದಹನಂ**-ಪರಿಹರಿಸುವ **ಸಜ್ಜನಾನ್**-ಸಜ್ಜನರನ್ನು **ಮೋದಯಂತಂ**-ಆನಂದಗೊಳಿಸುವ **ತಂ ತ್ವಾ**- ಆ ನಿಮ್ಮನ್ನು **ಭಕ್ತ್ಯಾ**-ಭಕ್ತಿಯಿಂದ **ವಂದೇ**-ವಂದಿಸುತ್ತೇನೆ

ದೇವನಾದ ಶ್ರೀಹರಿಯೆ, ನೀನು ಅತ್ಯಂತ ಪೂರ್ಣವಾದ ಯಥಾರ್ಥ ಜ್ಞಾನಉಳ್ಳವ ಆದ್ದರಿಂಲೆ ದೇವತೆಗಳೆಲ್ಲರಿಂದಲೂ ಜ್ಞಾನಕ್ಕಾಗಿ ಪ್ರತಿ ನಿತ್ಯ ಮೂಲ ಗುರುವೆಂದು ಆರಾಧಿಸಲ್ಪಡುವವ ಇಂಥ ನಿನಗೆ ನಮಿಸುತ್ತೇನೆ ನೀನು ಶಿವನನ್ನು ಮೂರು ಅವತಾರಗಳಲ್ಲಿಯೂ ಆರಾದಿಸಿ ಅಜ್ಞರಿಗೆ ಅನ್ಯಥಾ ಜ್ಞಾನ ಉಂಟುಮಾಡುವಿ ಹೇಗೆಂದರೆ ರಾಮನಾಗಿ ರಾಮೇಶ್ವರಲಿಂಗ ಪ್ರತಿಷ್ಠಿಸಿದಿ, ಕೃಷ್ಣನಾಗಿ ಕೈಲಾಸಯಾತ್ರೆ ಮಾಡಿದಿ, ವೇದವ್ಯಾಸರಾಗಿ ಶಿವನನ್ನು ತಪಸ್ಸಿನಿಂದ ಒಲಿಸಿಕೊಂಡು ಶುಕಮುನಿಯನ್ನು ಮಗನನ್ನಾಗಿ ಪಡೆದಿ ಆದ್ದರಿಂದ ಜ್ಞಾನಭಕ್ತಿ ವೈರಾಗ್ಯಾದಿ ದೈವೀಸಂಪತ್ತಿನಿಂದ ಶ್ರೀಮಂತರಾದ ಸಜ್ಜನರಿಗೆ ಮಾತ್ರ ನೀನು ಯಥಾರ್ದ ಜ್ಞಾನದ್ವಾರಾ ಮೋಕ್ಷಾನಂದ ನೀಡುವಿ ಇಂಥ ನಿನಗೆ ನಮಸ್ಕರಿಸುತ್ತೇನೆ ವೇದಾಭಿಮಾನಿನಿಯಾದ ಮಹಾಲಕ್ಷ್ಮಿಗೂ ತಪ್ಪದೆ ನಮಸ್ಕರಿಸುತ್ತೇನೆ ಶಾಸ್ತ್ರಾಧ್ಯಯನ ರೂಪವಾದ ನಿನ್ನ ಸಂಗದಿಂದ

ಗಂಗಾಸ್ನಾನಕ್ಕಿಂತ ಅಧಿಕ ಪುಣ್ಯ ಲಭಿಸುತ್ತದೆ ಆ ಮೂಲಕ ಸಂಸಾರ ಭಯವನ್ನು ಪರಿಹರಿಸಿ ಸಜ್ಜನರಿಗೆ ನೀನು ಆನಂದ ನೀಡುವಿ, ಇಂಥವನಿಗೆ ನಾನು ಭಕ್ತಿಯಿಂದ ನಮಸ್ಕರಿಸುತ್ತೇನೆ

**ಹನುಮದ್ ಭೀಮ ಮಧ್ವಾತ್ಮಕನೆ, ನಿನಗೆ ನಮೋ ನಮಃ !**

**ದೇವ**-ವಾಯುದೇವನೆ, **ಅಹಂ**-ನಾನು **ದೇವವೃಂದೈಃ**-ದೇವ ಸಮೂಹಗಳಿಂದ **ಅನುದಿನ**-ಪ್ರತಿನಿತ್ಯ **ಆಸೇವಿತಂ**-ಚೆನ್ನಾಗಿ ಸೇವಿಸಲ್ಪಡುವ **ಸುಪೂರ್ಣ ಪ್ರಮತಿಂ**-ಪೂರ್ಣ ಜ್ಞಾನ ಉಳ್ಳವನಾದ್ದರಿಂದ ಹನುಮಂತನೆನಿಸಿದ **ತಂ ತ್ವಾ**-ವೇದಪ್ರಸಿದ್ಧನಾದ ನಿನ್ನನ್ನು **ವಂದೇ**-ವಂದಿಸುತ್ತೇನೆ, **ಈಶೇ**-ಜಗನ್ನಾಥನಾದ ಹರಿಯ ವಿಷಯದಲ್ಲಿ **ವಂದಾರುಂ**-ಶಾಸ್ತ್ರವಿಚಾರ ರೂಪ ವಂದನೆ ಮಾಡುವವನಾದ್ದರಿಂದ ಭೀಮನೆನಿಸಿದ **ತಂ ತ್ವಾ**-ಆ ನಿನ್ನನ್ನು **ವಂದೇ**-ವಂದಿಸುತ್ತೇನೆ **ಶ್ರೀಮದಾನಂದತೀರ್ಥಂ**-ಸಜ್ಜನರಿಗೆ ಮೋಕ್ಷ ಸುಖಕಾರಣವಾದ ಶಾಸ್ತ್ರ ಉಪದೇಶಿಸುವವನಾದ್ದರಿಂದ ಆನಂದತೀರ್ಥ ಮಧ್ವ ಎಂದು ಪ್ರಸಿದ್ಧನಾದ **ತಂ ತ್ವಾ**-ಆ ನಿನ್ನನ್ನು **ವಂದೇ**-ವಂದಿಸುತ್ತೇನೆ **ಉತ**-ಮತ್ತು **ಶ್ರಿಯೇ**-ಭಾರತೀದೇವಿಗೂ **ನಿಯತಂ**-ತಪ್ಪದೆ **ವಂದೇ**-ವಂದಿಸುತ್ತೇನೆ **ಮಂದಾಕಿನೀ**-ಗಂಗೆ ಎಂಬ **ಸತ್ ಸರಿದ್**-ಉತ್ತಮ ನದಿಯ **ಅಮಲ**-ನಿರ್ಮಲವಾದ **ಜಲ**-ನೀರಿನ **ಆಸೇಕ**-ಸೇಚನಕ್ಕಿಂತ **ಸಾಧಿಕ್ಯ**-ಹೆಚ್ಚು ಪುಣ್ಯಕರವಾದ **ಸಂಗಂ**-ಶಾಸ್ತ್ರಾಧ್ಯಯನ ರೂಪವಾದ ಸಂಗ ಉಳ್ಳ **ಭವ ಭಯ**-ಸಂಸಾರ ಭಯವನ್ನು **ದಹನಂ**-ಪರಿಹರಿಸುವ **ಸಜ್ಜನಾನ್**-ಸಜ್ಜನರನ್ನು **ಮೋದಯಂತಂ**-ಆನಂದಗೊಳಿಸುವ **ತಂ ತ್ವಾ**-ಆ ನಿನ್ನನ್ನು **ಭಕ್ತ್ಯಾ**-ಭಕ್ತಿಯಿಂದ **ವಂದೇ**-ವಂದಿಸುತ್ತೇನೆ

ವಾಯುದೇವನೆ, ನಿನ್ನನ್ನು ದೇವತೆಗಳು ಪ್ರತಿನಿತ್ಯ ಚೆನ್ನಾಗಿ ಸೇವಿಸುತ್ತಾರೆ ಏಕೆಂದರೆ ನೀನು ಪೂರ್ಣಜ್ಞಾನ ಉಳ್ಳವನಾದ್ದರಿಂದ 'ಹನು ಶಬ್ದಃ ಜ್ಞಾನವಾಚೀ' ಎಂಬಂತ ಹನುಮಂತನೆಂದೆನಿಸಿದವನು ಇತ್ಯಾದಿ ಮಂತ್ರ ಪ್ರಸಿದ್ಧನಾದ ಅಂಥ ನಿನಗೆ ವಂದಿಸುತ್ತೇನೆ ಜಗನ್ನಾಥನಾದ ಶ್ರೀಹರಿಯ ವಿಷಯದಲ್ಲಿ ಶಾಸ್ತ್ರವಿಚಾರರೂಪ ವಂದನೆ ಮಾಡುವುದರಿಂದ, 'ನಿತ್ಯ ಅಶಯೀ ದ್ವಿತೀಯಮಾ ಸಪ್ತಶಿವಾನು ಮಾತ್ರಷು' ಎಂಬಂತೆ 'ಭೃತಾ ಮಾಃ ಯೇನ' ಎಂಬ

ವ್ಯುತ್ಪತ್ತ್ಯನುಸಾರ ಭೀಮನೆನಿಸಿದ ನಿನಗೆ ನಮಿಸುತ್ತೇನೆ ಸಜ್ಜನರಿಗೆ ಮೋಕ್ಷಾನಂದ ಕಾರಣವಾದ ಶಾಸ್ತ್ರ ಉಪದೇಶಿಸುವುದರಿಂದ ಆನಂದತೀರ್ಥ ಎಂದೂ ಮಧ್ವ ಎಂದೂ ಕರೆಸಿಕೊಂಡ ನಿನಗೆ ನಮಿಸುತ್ತೇನೆ ಸಕಲ ಶಾಸ್ತ್ರಗಳಿಗೆ ಅಭಿಮಾನಿನಿಯಾದ ಮತ್ತು 'ಶಂ ರೂಪಮಾಶ್ರಿತಾ ವಾಯುಂ' ಎಂಬ ವ್ಯುತ್ಪತ್ತಿಯಂತೆ ಶ್ರೀ ಎನಿಸಿದ ಭಾರತೀ ದೇವಿಗೂ ತಪ್ಪದೆ ನಮಸ್ಕರಿಸುತ್ತೇನೆ ಶಾಸ್ತ್ರಾಧ್ಯಯನ ರೂಪವಾದ ನಿನ್ನ ಸಂಗದಿಂದ ನಿರ್ಮಲವಾದ ಆಕಾಶಗಂಗಾಸ್ನಾನಕ್ಕಿಂತಲೂ ಅಧಿಕ ಪುಣ್ಯ ಲಭಿಸುವುದು ಆದ್ದರಿಂದ ಸಂಸಾರ ಭಯವನ್ನು ಪರಿಹರಿಸಿ ಸಜ್ಜನರನ್ನು ಆನಂದ ಪಡಿಸುವವ ನೀನು ಇಂಥ ನಿನಗೆ ಭಕ್ತಿಯಿಂದ ವಂದಿಸುತ್ತೇನೆ

(ಆದ್ಯಂತ ಶ್ರೀಕಾರ ಸಂಪುಟಿತವಾಗಿದ್ದು ಸಕಲ ಸಂಪತ್ಕರವಾದುದು ಈ ಶ್ರೀ ಹರಿವಾಯುಸ್ತುತಿ)

-೪೧-

**ಸಂಬ್ರಹ್ಮಣ್ಯಾಖ್ಯಸೂರೇಃ**
**ಸುತ ಇತಿ ಸುಭೃಶಂ ಕೇಶವಾನಂದತೀರ್ಥ-**
**ಶ್ರೀಮತ್ಪಾದಾಬ್ಜಭಕ್ತಃ**
**ಸ್ತುತಿಮಕೃತ ಹರೇರ್ವಾಯುದೇವಸ್ಯ ಚಾಸ್ಯ ।**
**ತತ್ಪಾದಾರ್ಚಾದರೇಣ**
**ಗ್ರಥಿತಪದಲಸನ್ಮಾಲಯಾ ತ್ವೇತಯಾ ಯೇ**
**ಸಂರಾಧ್ಯಾಮೂ ನಮಂತಿ**
**ಪ್ರತತ ಮತಿಗುಣಾ ಮುಕ್ತಿಮೇತೇ ವ್ರಜಂತಿ ॥**

ಇತಿ ಶ್ರೀಮತ್ಕವಿಕುಲತಿಲಕ ಶ್ರೀತ್ರಿವಿಕ್ರಮಪಂಡಿತಾಚಾರ್ಯ ವಿರಚಿತಾ ಶ್ರೀಹರಿವಾಯುಸ್ತುತಿಃ ಸಮಾಪ್ತಾ ॥

**ಸುಭೃಶಂ**-ಬಹಳವಾಗಿ **ಕೇಶವ**-ಶ್ರೀಹರಿಯ ಮತ್ತು **ಆನಂದತೀರ್ಥ**-ಮಧ್ವರ **ಶ್ರೀಮತ್**-ಸಂಪತ್ಕರವಾದ **ಪಾದಾಬ್ಜ**-

ಪಾದಕಮಲಗಳಲ್ಲಿ **ಭಕ್ತಃ**-ಭಕ್ತರಾದ **ಸುಬ್ರಹ್ಮಣ್ಯಾಖ್ಯ ಸೂರೇಃ**-ಸುಬ್ರಹ್ಮಣ್ಯ ಎಂಬ ಹೆಸರಿನ ವಿದ್ವಾಂಸರ **ಸುತಃ**-ಪುತ್ರರಾದ ತ್ರೀವಿಕ್ರಮಪಂಡಿತರು **ಇತಿ**-ಹೀಗೆ **ಅಸ್ಯ ಹರೇಃ-** ರಾಮಕೃಷ್ಣವೇದವ್ಯಾಸರೂಪಗಳಿಂದ ಅವತರಿಸಿದ ಹರಿಯ ಮತ್ತು **ಅಸ್ಯ ವಾಯುದೇವಸ್ಯ ಚ**-ಹನುಮ ಭೀಮ ಮಧ್ವ ರೂಪಗಳಿಂದ ಅವತರಿಸಿದ ವಾಯುದೇವನ **ಸ್ತುತಿಂ**-ಸ್ತುತಿಯನ್ನು **ಅಕೃತ**-ರಚಿಸಿದರು **ತತ್**-ಆ ಹರಿವಾಯುಗಳ **ಪಾದ**-ಪಾದಗಳ **ಅರ್ಚಾ**-ಅರ್ಚನೆಯಲ್ಲಿ **ಆದರೇಣ**-ಆದರದಿಂದ **ಗ್ರಥಿತ**-ಜೋಡಿಸಲ್ಪಟ್ಟ **ಪದ**-ಪದಗಳ **ಲಸತ್**-ಶೋಭಿಸುವ **ಮಾಲಯಾ**-ಮಾಲೆಯಂತಿರುವ **ಏತಯಾ**-ಈ ಹರಿವಾಯುಸ್ತುತಿಯಿಂದ **ಯೇ**-ಯಾರು **ಅಮೂ**-ಈ ಹರಿವಾಯುಗಳನ್ನು **ಸಂರಾಧ್ಯ**-ಆರಾಧಿಸಿ **ನಮಂತಿ**-ನಮಿಸುವರೋ **ಏತೇ**-ಇಂದವರು **ಪ್ರತತ**-ವಿಸ್ತಾರಗೊಂಡ **ಮತಿ**-ಜ್ಞಾನ ಮತ್ತು **ಗುಣಾಃ**-ಭಕ್ತಿ ವೈರಾಗ್ಯಾದಿ ಗುಣಗಳುಳ್ಳವರಾಗಿ **ಮುಕ್ತಿಂ**-ಮೋಕ್ಷವನ್ನು **ವ್ರಜಂತಿ**-ಹೊಂದುತ್ತಾರೆ

ಸುಬ್ರಹ್ಮಣ್ಯಪಂಡಿತರ ಸುಪುತ್ರರಾದ ತ್ರಿವಿಕ್ರಮಪಂಡಿತರು ರಾಮ ಕೃಷ್ಣ ವೇದವ್ಯಾಸಾತ್ಮಕನಾದ ಹರಿಯಲ್ಲಿಯೂ ಹನುಮದ್ ಭೀಮಮಧ್ವಾತ್ಮಕನಾದ ವಾಯುದೇವನಲ್ಲಿಯೂ ಬಹಳ ಭಕ್ತಿಯಿಂದ ಈ ಹರಿವಾಯುಸ್ತುತಿಯನ್ನು ರಚಿಸಿದರು ಹರಿವಾಯುಗಳ ಪಾದಾರ್ಚನೆಯಲ್ಲಿ ಆದರದಿಂದ ರಚಿಸಿರುವ ಈ ವಾಙ್ಮಯ ಪುಷ್ಪಮಾಲೆಯಿಂದ ಯಾರು ಈ ಇಬ್ಬರನ್ನೂ ಚೆನ್ನಾಗಿ ಆರಾಧಿಸಿ ನಮಿಸುವರೋ ಅವರು ಜ್ಞಾನಭಕ್ತ್ಯಾದಿಗಳನ್ನು ದಿನೇ ದಿನೇ ವೃದ್ಧಿಪಡಿಸಿಕೊಂಡು ಮುಕ್ತಿ ಭಾಗಿಗಳಾಗುತ್ತಾರೆ

**ದೃಷ್ಟ್ವಾ ಶ್ರೀಪಂಡಿತಾರ್ಯಃ**

**ಕ್ವಚಿದತುಲಮತಿಂ ಸನ್ಮರೇ ರಾಮಕೃಷ್ಣ -**

**ವ್ಯಾಸಾಖ್ಯತ್ರೀಶಮೂರ್ತಿಃ**

**ಸುರುಚಿರಹನುಮದ್ಭೀಮಮಧ್ವಾಖ್ಯರೂಪೈಃ**

**ಭಕ್ತ್ಯಾ ಸಂಸೇವಮಾನಂ**

**ಪುಲಕಿತಸುತನುರ್ಧನ್ಯಮಾನ್ಯೋऽಕೃತೈತಾಂ**

ಆದ್ಯಂತಂ ವಿಷ್ಣುವಾಯೂ-

ಭಯಚರಿತಪರಾಂ ಸಂಸ್ತುತಿಂ ಸದ್ಯ ಏವ ||

ಸುಬ್ರಹ್ಮಣ್ಯಾಖ್ಯಸೂರೇಃ

ಸುತ ಇತಿ ನೃಹರೇರ್ವಾಯುದೇವಸ್ಯ ಚಾಸ್ಯ

ಶ್ರೀಮತ್ಪಾದಾಬ್ಜಭಕ್ತೋ

ಹಯವದನಕೃತೀ ಸಂಸ್ತುತಿಂ ವ್ಯಾಕೃತೈತಾಂ

ತತ್ಪಾದಾರ್ಚಾದರೇಣೋ-

ಭಯಪರಮುಭಯಾರ್ಥಂ ಸುಖೀನೇರಯಂಸ್ತಂ

ಮತ್ವಾ ಯೇಽಮೂ ನಮಂತಿ

ಪ್ರತತಮತಿಗುಣಾ ಮುಕ್ತಿಮೇತೇ ಭಜಂತಿ ||

ಇತಿ ಶ್ರೀಮತ್ಕವಿಕುಲತಿಲಕ ಶ್ರೀತ್ರಿವಿಕ್ರಮಪಂಡಿತಾಚಾರ್ಯ ವಿರಚಿತಾಯಾಃ

ಶ್ರೀ ಹರಿವಾಯುಸ್ತುತೇಃ ಹರಿ ವಾಯು ಉಭಯ ಪರ ಕರ್ಣಾಟಭಾಷಾಟೀಕಾ

ಹಯವದನ ಕೃತಿನಾ ಕೃತಾ ಸಮಾಪ್ತಾ

**ಶ್ರೀಕೃಷ್ಣಾರ್ಪಣಮಸ್ತು**

ಜ ಜ ಜ ಜ ಜ

# ಶ್ರೀ ಖಿಲ ವಾಯುಸ್ತುತಿ

**ವಾಯುರ್ಭೀಮೋ ಭೀಮನಾದೋ ಮಹೌಜಾಃ**
**ಸರ್ವೇಷಾಂ ಚ ಪ್ರಾಣಿನಾಂ ಪ್ರಾಣಭೂತಃ ।**
**ಅನಾವೃತ್ತಿರ್ದೇಹಿನಾಂ ದೇಹಪಾತೇ**
**ತಸ್ಮಾದ್ ವಾಯುರ್ದೇವದೇವೋ ವಿಶಿಷ್ಟಃ ॥**
**(ಮ. ಭಾರ. ಶಾಂತಿ ೨೫೮-೪೦)**

**ವಾಯುಃ**-ವಾಯುದೇವನು **ಭೀಮಃ**-ಶತ್ರು ಭಯಂಕರ **ಭೀಮನಾದಃ**-ಶತ್ರುಭೀಕರ ಸಿಂಹನಾದಗೈವವನು **ಮಹೌಜಾಃ**-ಮಹಾಪ್ರತಾಪಿ **ಸರ್ವೇಷಾಂ** - ಎಲ್ಲಾ **ಪ್ರಾಣಿನಾಂ ಚ** - ಜೀವಿಗಳಿಗೂ **ಪ್ರಾಣಭೂತಃ** - ಶ್ವಾಸಾಭಿಮಾನಿಯಾಗಿರುವವನು **ದೇಹಿನಾಂ** - ಜೀವಿಗಳ **ದೇಹಪಾತೇ** - ಶರೀರಪಾತವಾಗುವಾಗ **ಅನ** - ವಾಯುದೇವನಿಗೆ **ಅವೃತ್ತಿ** - ಆ ದೇಹದಲ್ಲಿ ಆಸ್ತಿತ್ವವಿಲ್ಲ ಮತ್ತು **ವಾಯುಃ** - ವಾಯುದೇವನು **ಅನಾವೃತ್ತಿಃ** - ಆವೃತ್ತಿ ಇಲ್ಲದವನು, **ತಸ್ಮಾತ್** - ಆದುದರಿಂದ **ವಾಯುಃ** - ವಾಯುದೇವನು **ದೇವ ದೇವಃ** - ದೇವೋತ್ತಮನು **ವಿಶಿಷ್ಟಃ** - ಜೀವೋತ್ತಮನು

ವಾಯುದೇವನು ಶತ್ರುಭಯಂಕರ ಶತ್ರುಭೀಕರವಾದ ಸಿಂಹನಾದ ಗೈವವನು, ಮಹಾಪ್ರತಾಪಿ ಎಲ್ಲಾ ಜೀವಿಗಳ ಶ್ವಾಸಾಭಿಮಾನಿ * ಜೀವಿಗಳ ದೇಹಪಾತವಾಗುವಾಗ ವಾಯುದೇವ ಆ ಶರೀರದಲ್ಲಿ ಇರುವುದು ಕಂಡಿಲ್ಲ ಆದ್ದರಿಂದ ಅವನು ಹೊರಗೆ ಹೋಗುವುದರಿಂದಲೆ ಶರೀರಪಾತ ಅವನು ಆವೃತ್ತಿ ಇಲ್ಲದವ, ಅಂದರೆ ಜೀವಿಯ ಮರಣಕಾಲದಲ್ಲಿ ಇತರ ಇಂದ್ರಿಯ ದೇವತೆಗಳಂತೆ ಒಂದು ಅಂಶದಿಂದ ತನ್ನ ಮೂಲರೂಪಕ್ಕೆ ಹೋಗಿ ಸೇರುವವನಲ್ಲ ಜೀವ ಪರಮಾತ್ಮರನ್ನು ಹೊತ್ತು ನೇರವಾಗಿ ಇನ್ನೊಂದು ಶರೀರವನ್ನೆ ಪ್ರವೇಶಿಸುವವನು ಆದ್ದರಿಂದ ಅವನು ರುದ್ರಾದಿ ಎಲ್ಲ ದೇವತೆಗಳಿಗಿಂತಲೂ ಉತ್ತಮ, ಎಲ್ಲ ಜೀವರಿಗಿಂತಲೂ ಉತ್ತಮ

**ಜ್ಞಾನೇ ವಿರಾಗೇ ಹರಿಭಕ್ತಿ ಭಾವೇ**
**ಧೃತಿಸ್ಥಿತಿಪ್ರಾಣಬಲೇಷು ಯೋಗೇ ।**
**ಬುದ್ಧೌ ಚ ನಾನ್ಯೋ ಹನುಮತ್ಸಮಾನಃ**
**ಪುಮಾನ್ ಕದಾಚಿತ್ ಕ್ವಚ ಕಶ್ಚ ನೈವ ॥**

**ಜ್ಞಾನೇ**-ಜ್ಞಾನದಲ್ಲಿ **ವಿರಾಗೇ**-ವೈರಾಗ್ಯದಲ್ಲಿ **ಹರಿಭಕ್ತಿಭಾವೇ**-ಹರಿಭಕ್ತಿ ಎಂಬ ಭಾವದಲ್ಲಿ **ಧೃತಿಸ್ಥಿತಿಪ್ರಾಣಬಲೇಷು**-ಧೈರ್ಯ ಸ್ಥಿರತೆ ಪ್ರಾಣ ಮತ್ತು ಆತ್ಮಬಲಗಳಲ್ಲಿ **ಯೋಗೇ**-ಯೋಗ ಶಕ್ತಿಯಲ್ಲಿ ಮತ್ತು **ಬುದ್ಧೌ ಚ**-ಬುದ್ಧಿ ಶಕ್ತಿಯಲ್ಲಿಯೂ **ಹನುಮತ್ ಸಮಾನಃ**-ಹನುಮಂತನಿಗೆ ಸಮಾನನಾದ **ಅನ್ಯಃ ಪುಮಾನ್**-ಇನ್ನೊಬ್ಬ ಪುರುಷನು **ಕದಾಚಿತ್**-ಎಂದೂ **ಕ್ವಚ**-ಎಲ್ಲಿಯೂ **ಕಶ್ಚ**-ಯಾರೂ **ನೈವ**-ಇಲ್ಲವೇಇಲ್ಲ

ಜ್ಞಾನ ವೈರಾಗ್ಯ ಹರಿಭಕ್ತಿ ಧೈರ್ಯ ಸ್ಥೈರ್ಯ ಪ್ರಾಣ ಆತ್ಮಬಲ ಯೋಗಶಕ್ತಿ ಬುದ್ಧಿಶಕ್ತಿ ಇವುಗಳಲ್ಲಿ ಹನುಮಂತನಿಗೆ ಸಮನಾದ ಪುರುಷನೆಂದೂ ಎಲ್ಲಿಯೂ ಯಾರೂ ಇಲ್ಲವೆ ಇಲ್ಲ

**ವಾತೇನ ಕುಂತ್ಯಾಂ ಬಲವಾನ್ ಸ ಜಾತಃ**
**ಶೂರಸ್ತಪಸ್ವೀ ದ್ವಿಷತಾಂ ನಿಹಂತಾ ।**
**ಸತ್ಯೇ ಚ ಧರ್ಮೇ ಚ ರತಃ ಸದೈವ**
**ಪರಾಕ್ರಮೇ ಶತ್ರುಭಿರಪ್ರಧೃಷ್ಯಃ ॥**

**ಸಃ** - ಆ ಭೀಮನು **ವಾತೇನ** - ವಾಯುದೇವನಿಂದ **ಕುಂತ್ಯಾಂ** - ಕುಂತೀದೇವಿಯಲ್ಲಿ **ಜಾತಃ**-ಹುಟಿದವನು, **ಬಲವಾನ್**-ಮಹಾಬಲಿಷ್ಠನು **ಶೂರಃ**-ಶೂರನು **ತಪಸ್ವೀ**-ತಪಸ್ವಿಯು **ದ್ವಿಷತಾಂ**-ಶತ್ರುಗಳನ್ನು **ನಿಹಂತಾ**-ಕೊಲ್ಲುವವನು **ಸತ್ಯೇ ಚ**-ಸತ್ಯದಲ್ಲಿಯೂ **ಧರ್ಮೇ ಚ**-ಧರ್ಮದಲ್ಲಿಯೂ **ಸದೈವ**-ಯಾವಾಗಲೂ **ರತಃ**-ಆಸಕ್ತನು **ಪರಾಕ್ರಮೇ** -ಪರಾಕ್ರಮದಲ್ಲಿ **ಶತ್ರುಭಿಃ**-ಶತ್ರುಗಳಿಂದ **ಅಪ್ರಧೃಷ್ಯಃ**-ಮಣಿಸಲಾರದವನು

ಆ ಭೀಮನು ವಾಯುದೇವನಿಂದ ಕುಂತಿಯಲ್ಲಿ ಹುಟ್ಟಿದವನು ಮಹಾಬಲಿಷ್ಠ, ಶೂರ, ತಪಸ್ವಿ, ಶತ್ರುಗಳನ್ನು ಕೊಲ್ಲುವವ, ಸತ್ಯದಲ್ಲಿಯೂ

ಧರ್ಮದಲ್ಲಿಯೂ ಯಾವಾಗಲೂ ಆಸಕ್ತನಾದವ, ಪರಾಕ್ರಮದಲ್ಲಿ ಶತ್ರುಗಳಿಂದ ಮಣಿಸಲಾಗದವ

**ಪ್ರಥಮೋ ಹನುಮಾನ್ ನಾಮ ದ್ವಿತೀಯೋ ಭೀಮ ಏವ ಚ।**
**ಪೂರ್ಣಪ್ರಜ್ಞ ಸ್ತೃತೀಯಸ್ತು ಭಗವತ್ಕಾರ್ಯಸಾಧಕಃ ॥**

**ಭಗವತ್ಕಾರ್ಯಸಾಧಕಃ**-ಭಗವಂತನ ಕಾರ್ಯವನ್ನು ಸಾಧಿಸುವುದರಲ್ಲಿ ಸಮರ್ಥನಾದ **ಪ್ರಥಮಃ**-ವಾಯುದೇವನ ಮೊದಲನೆಯ ಅವತಾರವು **ಹನುಮಾನ್ ನಾಮ**-ಹನುಮಂತನೆಂದು ಪ್ರಸಿದ್ಧವಾದುದು **ಚ**-ಮತ್ತು **ದ್ವಿತೀಯಃ**-ಎರಡನೆ ಅವತಾರವು **ಭೀಮ ಏವ**-ಭೀಮನೇ **ತೃತೀಯಸ್ತು**-ಮೂರನೆಯ ಅವತಾರವಾದರೋ **ಪೂರ್ಣಪ್ರಜ್ಞಃ**-ಶ್ರೀ ಪೂರ್ಣಪ್ರಜ್ಞರು

ಭಗವಂತನ ಬಲಕಾರ್ಯ ಸಾಧನೆಯಲ್ಲಿ ಪ್ರಧಾನಾಂಗವಾದ ಹನುಮಂತನೇ ವಾಯುವಿನ ಮೊದಲನೆ ಅವತಾರ ಎರಡನೆಯದು ಭಗವಂತನ ಬಲಕಾರ್ಯದಲ್ಲಿ ಪ್ರಧಾನಾಂಗವಾದ ಭೀಮಾವತಾರ ಮೂರನೆಯದು ಜ್ಞಾನಕಾರ್ಯದಲ್ಲಿ ಪ್ರಧಾನಾಂಗವಾದ ಮಧ್ವಾವತಾರ

**ಬ್ರಹ್ಮಾಂತಾ ಗುರವಃ ಸಾಕ್ಷಾದ್ ಇಷ್ಟಂ ದೈವಂ ಶ್ರಿಯಃಪತಿಃ ।**
**ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನಿ ॥**

**ಬ್ರಹ್ಮಾಂತಾಃ**-ಬ್ರಹ್ಮದೇವರವರೆಗಿನ ದೇವತೆಗಳ್ಳೆ **ಮೇ**-ನನಗೆ **ಜನ್ಮಜನ್ಮನಿ**-ಪ್ರತಿಜನ್ಮದಲ್ಲಿಯೂ **ಗುರವಃ**-ಗುರುಗಳಾಗಿ **ಸಂತು**-ಇರಲಿ **ಸಾಕ್ಷಾತ್ ಶ್ರಿಯಃ ಪತಿಃ**-ಸಾಕ್ಷಾತ್ ಶ್ರೀಪತಿಯೆ **ಇಷ್ಟಂ ದೈವಂ**-ಇಷ್ಟ ದೇವತೆಯಾಗಿರಲಿ **ಶ್ರೀಮದಾಚಾರ್ಯಾಃ**-ಶ್ರೀಮದಾಚಾರ್ಯರೆ **ಆಚಾರ್ಯಾಃ**-ಉಪದೇಶಕರಾಗಿ **ಸಂತು**-ಇರಲಿ

ನನ್ನ ವಿದ್ಯೋಪದೇಶಕರಿಂದ ತೊಡಗಿ ಬ್ರಹ್ಮದೇವರ ವರೆಗಿನ ಎಲ್ಲ ಜ್ಞಾನಿಗಳೂ ನನಗೆ ಪ್ರತಿಜನ್ಮದಲ್ಲಿಯೂ ಗುರುಗಳಾಗಿರಲಿ ಸಾಕ್ಷಾತ್ ಲಕ್ಷ್ಮೀಪತಿ ಇಷ್ಟದೇವತೆ ಎನಿಸಲಿ ಶ್ರೀಮಧ್ವಾಚಾರ್ಯರೆ ತತ್ವೋಪದೇಶಕರಾಗಿರಲಿ

**ಯಸ್ಯ ತ್ರೀಣ್ಯುದಿತಾನಿ ವೇದವಚನೇ**
**ರೂಪಾಣಿ ದಿವ್ಯಾನ್ಯಲಂ**
**ಬಟ್ ತದ್ದರ್ಶತಮಿತ್ಥಮೇವ ನಿಹಿತಂ**
**ದೇವಸ್ಯ ಭರ್ಗೋ ಮಹತ್**
**ವಾಯೋ ರಾಮವಚೋನಯಂ ಪ್ರಥಮಕಂ**
**ಪೃಕ್ಷೋ ದ್ವಿತೀಯಂ ವಪು -**
**ರ್ಮಧ್ವೋ ಯತ್ತು ತೃತೀಯಮೇತದಮುನಾ**
**ಗ್ರಂಥಃ ಕೃತಃ ಕೇಶವೇ** ||

**ವೇದವಚನೇ**-ವೇದಸೂಕ್ತದಲ್ಲಿ **ಯಸ್ಯ**-ಯಾವ **ದೇವಸ್ಯ**-ದೇವನ **ಅಲಂ**-ಅತ್ಯಂತ **ದಿವ್ಯಾನಿ**-ಅದ್ಭುತವಾದ **ತ್ರೀಣಿ**-ಮೂರು **ರೂಪಾಣಿ**-ರೂಪಗಳು **ಅಲಂ**-ಚೆನ್ನಾಗಿ **ಉದಿತಾನಿ**-ಉಕ್ತವಾಗಿವೆಯೋ, **ಯಸ್ಯ**-ಯಾರ **ತತ್**-ಆ ಮೂಲರೂಪವು **ಬಟ್**- ಬಲರೂಪವೂ **ದರ್ಶತಂ**-ಜ್ಞಾನ ಪೂರ್ಣವೂ **ಭರ್ಗ**-ಜಗತ್ತಿಗ ಪೋಷಣೆ ಪ್ರೇರಣೆ ನೀಡುವಂತಹುದೂ **ಮಹತ್**-ಶ್ರೇಷ್ಠವೂ ಆಗಿದೆಯೋ **ಯಸ್ಯ**-ಯಾರ **ತತ್**-ಆ ಅವತಾರ ರೂಪವು **ಇತ್ಥಮೇವ**-ಹೀಗೆ ಬಲಾದಿ ರೂಪವಾಗಿಯೇ **ನಿಹಿತಂ**-ಇಡಲ್ಪಟ್ಟಿದೆಯೋ **ವಾಯೋಃ**-ಆ ವಾಯುದೇವನ **ಪ್ರಥಮಕಂ ವಪುಃ** - ಪ್ರಥಮಾವತಾರವು **ರಾಮವಚೋನಯಂ** - ರಾಮನ ಸಂದೇಶವನ್ನೊಯ್ಯುವಂಥಹುದು **ದ್ವಿತೀಯಂ ವಪುಃ**-ದ್ವಿತೀಯಾವತಾರವು **ಪೃಕ್ಷಃ**-ಶತ್ರುಸೇನಾನಾಶಕ **ಮಧ್ವೋ ಯತು**-ಮಧ್ವ ಎಂದು ಯಾವ ರೂಪವು ಪ್ರಸಿದ್ಧವಾಗಿದೆಯೋ **ಏತತ್**-ಇದು **ತೃತೀಯಂ ವಪು**-ತೃತೀಯಾವತಾರ **ಅಮುನಾ**-ಅದರಿಂದಲೇ **ಕೇಶವೇ**-ಹರಿಯನ್ನು ಕೊಂಡಾಡುವ **ಗ್ರಂಥ**-ಗ್ರಂಥವು **ಕೃತಃ**-ರಚಿಸಲ್ಪಟಿತು

ಬಳಿತ್ಥಾದಿ ಸೂಕ್ತದಲ್ಲಿ ವಾಯುದೇವನ ಅತ್ಯಂತ ದಿವ್ಯವಾದ ಮೂರು ಅವತಾರಗಳನ್ನು ಚೆನ್ನಾಗಿ ವರ್ಣಿಸಲಾಗಿದೆ ಅವನ ಮೂಲರೂಪ ಬಲ ಜ್ಞಾನಾದಿರೂಪವಾಗಿದ್ದು ಲೋಕಕ್ಕೆ ಪೋಷಣೆ ಪ್ರೇರಣೆ ನೀಡುತ್ತಿರುವಂತೆ ಅವತಾರರೂಪಗಳೂ ಹಾಗೇ ಇವೆ ರಾಮನ ಸಂದೇಶ ಒಯ್ದುದು ಪ್ರಥಮಾವತಾರ ಕೌರವ ಸೇನೆಯನ್ನು ಮುರಿದುದು ದ್ವಿತೀಯಾವತಾರ ಮಧ್ವ

ಎಂಬ ಪ್ರಸಿದ್ಧವಾದುದೆ ತೃತೀಯಾವತಾರ ಅದೇ ಹರಿಸರ್ವೋತ್ತಮತ್ವ ಪ್ರತಿಪಾದಕವಾದ ಸರ್ವಮೂಲ ಗ್ರಂಥಗಳನ್ನು ನಿರ್ಮಿಸಿತು

**ಮಹಾವ್ಯಾಕರಣಾಂಭೋಧಿಮಂಥಮಾನಸಮಂದರಂ ।**
**ಕವಯಂತಂ ರಾಮಕೀರ್ತ್ಯಾ ಹನೂಮಂತಮುಪಾಸ್ಮಹೇ ॥**

**ಮಹಾವ್ಯಾಕರಣಾಂಭೋಧಿ** - ಮಹಾವ್ಯಾಕರಣವೆಂಬಸಮುದ್ರದ **ಮಂಥ**-ಮಥನದಲ್ಲಿ **ಮಾನಸ**-ಮನಸ್ಸೆಂಬ **ಮಂದರಂ**-ಮಂದರಪರ್ವತ ಉಳ್ಳ **ರಾಮಕೀರ್ತ್ಯಾ**-ರಾಮನ ಗುಣಗಾನದಿಂದ **ಕವಯಂತಂ**-ಕವಿತೆ ಮಾಡುವ **ಹನೂಮಂತಂ**-ಹನುಮಂತನನ್ನು **ಉಪಾಸ್ಮಹೇ**-ಉಪಾಸನೆ ಮಾಡುತ್ತೇವೆ

ದೇವಾಸುರರು ಕ್ಷೀರಸಮುದ್ರವನ್ನು ಮಂದರಪರ್ವತದಿಂದ ಮಥಿಸಿದಂತೆ ಹನುಮಂತನು ಮಹಾವ್ಯಾಕರಣ ಶಾಸ್ತ್ರವನ್ನು ತನ್ನ ಮನಸ್ಸಿನಿಂದ ಆಲೋಚನೆ ಮಾಡುತ್ತಾನ ಮತ್ತು ಶ್ರೀರಾಮನ ಗುಣಗಾನದಿಂದ ಕವಿತೆಗಳನ್ನು ಮಾಡುತ್ತಾನೆ. ಹೀಗ ಶಬ್ದ ಅರ್ಥಗಳೆರಡರಲ್ಲಿಯೂ ಅತ್ಯುತ್ತಮವಾಗಿ ಕವಿತೆ ಮಾಡುವ ಶಕ್ತಿ ಉಳ್ಳ ಹನುಮಂತನನ್ನು ನಾವು ಉಪಾಸನೆ ಮಾಡುತ್ತೇವ

**ಮುಖ್ಯಪ್ರಾಣಾಯ ಭೀಮಾಯ**
**ನಮೋ ಯಸ್ಯ ಭುಜಾಂತರಂ ।**
**ನಾನಾವೀರಸುವರ್ಣಾನಾಂ**
**ನಿಕಷಾಶ್ಮಾಯಿತಂ ಬಭೌ ॥**

**(ಸಂಗ್ರಹ ರಾಮಾಯಣ)**

**ಯಸ್ಯ**- ಯಾರ **ಭುಜಾಂತರಂ** - ಎದೆಯು **ನಾನಾ ವೀರಸುವರ್ಣಾನಾಂ** - ನಾನಾ ಬಗೆಯ ವೀರರೆಂಬ ಚಿನ್ನಗಳಿಗೆ **ನಿಕಷಾಶ್ಮಾಯಿತಂ** - ಒರೆಗಲ್ಲಿನಂತಿದ್ದು **ಬಭೌ** - ಶೋಭಿಸುತ್ತೋ **ಭೀಮಾಯ** - ಭೀಮಾವತಾರಿಯಾದ **ಮುಖ್ಯಪ್ರಾಣಾಯ** - ಅಂಥ ಮುಖ್ಯಪ್ರಾಣನಿಗೆ **ನಮಃ** - ನಮಸ್ಕಾರ

ಚಿನ್ನವನ್ನು ಒರೆಗಲ್ಲಿಗೆ ಘರ್ಷಣೆ ಮಾಡಿದಾಗ ಚಿನ್ನದ ಶುದ್ಧಾಶುದ್ಧತೆಯು ತಿಳಿದು ಬಂದೀತು ಹೊರತು ಒರೆಗಲ್ಲಿಗೆ ಏನೂ ಆಗಲಾರದು ಹಾಗೆಯೆ ಭೀಮಾವತಾರಿ ಮುಖ್ಯಪ್ರಾಣನ ಎದೆಗೆ ವೀರರು ಶಸ್ತ್ರ ಪ್ರಯೋಗಿಸಿದಾಗ ಅವನಿಗೇನೂ ಆಗದೆ ಆ ವೀರರ ಸತ್ವಪರೀಕ್ಷೆ ಮಾತ್ರವೆ ಆಗುತ್ತಿತ್ತು. ಅಂಥ ಮುಖ್ಯಪ್ರಾಣನಿಗೆ ನಮೋ ಎನ್ನುತ್ತೇನೆ

**ಸ್ವಾಂತಸ್ಥಾನಂತಶಯ್ಯಾಯ ಪೂರ್ಣಜ್ಞಾನರನಾರ್ಣಸೇ ।**
**ಉತ್ತುಂಗ ವಾಕ್ತರಂಗಾಯ ಮಧ್ವದುಗ್ಧಾಬ್ಧಯೇ ನಮಃ ॥**

**ಸ್ವಾಂತಸ್ಥಾನಂತಶಯ್ಯಾಯ** - ತನ್ನೊಳಗೆ ಅನಂತಶಯನನಾದ ಶ್ರೀಹರಿಯನ್ನು ಇಟ್ಟುಕೊಂಡಿರುವ **ಪೂರ್ಣಜ್ಞಾನರನಾರ್ಣಸೇ** - ಪೂರ್ಣ ಜ್ಞಾನರಸವೆಂಬ ನೀರುಳ್ಳ **ಉತ್ತುಂಗವಾಕ್‌ತರಂಗಾಯ** - ಶ್ರೇಷ್ಠವಾದ ಮಾತುಗಳೆಂಬ ಅಲೆಗಳುಳ್ಳ **ಮಧ್ವದುಗ್ಧಾಬ್ಧಯೇ** - ಮಧ್ವರೆಂಬ ಕ್ಷೀರ ಸಮುದ್ರಕ್ಕೆ **ನಮಃ** - ನಮಸ್ಕಾರ

ಕ್ಷೀರಸಮುದ್ರವು ತನ್ನೊಳಗೆ ಅನಂತಶಯನನಾದ ಹರಿಯನ್ನಿರಿಸಿಕೊಂಡಿದೆ ಪೂರ್ಣಜಲಮಯವಾಗಿದೆ ಉನ್ನತವಾದ ತರಂಗಗಳಿಂದ ಕೂಡಿದೆ ಹಾಗೆ ಮಧ್ವರೆಂಬ ಕ್ಷೀರಸಮುದ್ರವು ತನ್ನೊಳಗೆ ಅನಂತಾಸನನಾದ ಹರಿಯನ್ನು ಇರಿಸಿಕೊಂಡಿದೆ ಪೂರ್ಣವಾದ ತತ್ವಜ್ಞಾನರಸವೆಂಬ ನೀರಿಂದ ತುಂಬಿದ ಉನ್ನತವಾದ ಮಾತುಗಳೆಂಬ ಅಲೆಗಳಿಂದ ಯುಕ್ತವಾಗಿದ ಅಂಥ ಮಧ್ವರೆಂಬ ಕ್ಷೀರಸಮುದ್ರಕ್ಕೆ ನಮಸ್ಕಾರ

**ಯೇನಾಹಮಿಹ ದುರ್ಮಾರ್ಗಾ -**
**ದುದ್ಧೃತ್ಯಾಭಿನಿವೇಶಿತಃ ।**
**ಸಮ್ಯಕ್ ಶ್ರೀವೈಷ್ಣವೇ ಮಾರ್ಗೇ**
**ಪೂರ್ಣಪ್ರಜ್ಞಂ ನಮಾಮಿ ತಂ ॥**

**ಅಹಂ** - ನಾನು **ಯೇನ** - ಯಾರಿಂದ **ಇಹ** - ಈ ಭೂಲೋಕದಲ್ಲಿ **ದುರ್ಮಾರ್ಗಾತ್** - ದುರ್ಮಾರ್ಗದಿಂದ **ಉದ್ಧೃತ್ಯ** - ಎತ್ತಿ **ಶ್ರೀವೈಷ್ಣವೇ ಮಾರ್ಗೇ** - ಶ್ರೀವೈಷ್ಣವಮಾರ್ಗದಲ್ಲಿ **ಸಮ್ಯಕ್** - ಚೆನ್ನಾಗಿ

**ಅಭಿನಿವೇಶಿತಃ**-ಇರಿಸಲ್ಪಟ್ಟೆನೋ **ತಂ**-ಆ **ಪೂರ್ಣಪ್ರಜ್ಞಂ**-ಶ್ರೀಮಧ್ವರನ್ನು **ನಮಾಮಿ**-ನಮಸ್ಕರಿಸುತ್ತೇನೆ

ನಾನು ಈ ಭೂಲೋಕದಲ್ಲಿ ವಿಷ್ಣುಭಕ್ತಿರಹಿತವಾದ ದುರ್ಮಾರ್ಗದಲ್ಲಿ ಬಿದ್ದಿದ್ದೆ ಅಲ್ಲಿಂದ ಎತ್ತಿ ನನ್ನನ್ನು ಶ್ರೀವಿಷ್ಣೂಪಾಸನೆಯ ಮಾರ್ಗವಲ್ಲಿ ಚೆನ್ನಾಗಿ ಇರಿಸುವವರು ಶ್ರೀಮಧ್ವರು, ಅವರಿಗೆ ವಂದಿಸುತ್ತೇನೆ

**ಯಃ ಸರ್ವಗುಣಸಂಪೂರ್ಣಃ**
**ಸರ್ವದೋಷವಿವರ್ಜಿತಃ ।**
**ಪ್ರೀಯತಾಂ ಪ್ರೀತ ಏವಾಲಂ**
**ವಿಷ್ಣುರ್ಮೇ ಪರಮಃ ಸುಹೃತ್ ॥**

**ಯಃ**-ಯಾರು **ಸರ್ವಗುಣಸಂಪೂರ್ಣಃ**-ಎಲ್ಲ ಗುಣಗಳಲ್ಲಿಯೂ ಚೆನ್ನಾಗಿ ಪೂರ್ಣನಾಗಿರುವನೋ **ಸರ್ವದೋಷವಿವರ್ಜಿತಃ**-ಎಲ್ಲ ದೋಷಗಳಿಂದಲೂ ರಹಿತನಾಗಿರುವನೋ **ಪರಮಃ ಸುಹೃತ್**- ಪರಮ ಮಿತ್ರನಾದ **ವಿಷ್ಣುಃ**- ಆ ವಿಷ್ಣುವು **ಪ್ರೀತ ಏವ**-ಸಂತುಷ್ಟನಾಗೇ ಇದ್ದರೂ **ಮೇ**-ನನ್ನ ವಿಷಯದಲ್ಲಿ **ಅಲಂ**-ಚೆನ್ನಾಗಿ **ಪ್ರೀಯತಾಂ**-ಸಂತುಷ್ಟನಾಗಲಿ **ಮೇ**-ನನಗ **ಅಲಂ**-ಇಷ್ಟೇ ಸಾಕು

ಸಕಲ ಗುಣ ಪರಿಪೂರ್ಣನೂ ಸಕಲ ದೋಷ ರಹಿತನೂ ನನಗೆ ಪರಮ ಮಿತ್ರನೂ ಆದ ಆ ವಿಷ್ಣು ಸದಾ ಸಂತುಷ್ಟನೆ ಆಗಿದ್ದರೂ ನನ್ನ ವಿಷಯದಲ್ಲಿ ಇನ್ನೂ ಹೆಚ್ಚು ಸಂತುಷ್ಟನಾಗಲಿ ಇಷ್ಟೆ ಸಾಕು ಹೀಗೆ ಅನುಕೊಳ್ಳುವುದೆ ಮುಖ್ಯವಾಗಿ ಶ್ರೀವೈಷ್ಣವಮಾರ್ಗ ಅದರಲ್ಲಿ ನನ್ನನ್ನಿರಿಸಿದ ಮಧ್ವರಿಗೆ ವಂದಿಸುತ್ತೇನೆ ಅವರಿಗೆ ಇನ್ನೇನೂ ಪ್ರತ್ಯುಪಕಾರ ಮಾಡಲು ನಾನು ಶಕ್ತನಲ್ಲ

**ಸೂಕ್ತಿರತ್ನಾಕರೇ ರಮ್ಯೇ**
**ಮೂಲರಾಮಾಯಣಾರ್ಣವೇ ।**
**ವಿಹರಂತೋ ಮಹೀಯಾಂಸಃ**
**ಪ್ರೀಯಂತಾಂ ಗುರವೋ ಮಮ ॥**

**(ಸಂಗ್ರಹ ರಾಮಾಯಣ)**

**ಸೂಕ್ತಿರತ್ನಾಕರೇ** - ಸೂಕ್ತಿರತ್ನಗಳಿಗೆ ಆಕರವಾಗಿರುವ ' **ರಮ್ಯೇ** - ರಮ್ಯವಾದ **ಮೂಲ ರಾಮಾಯಣ** - ಮೂಲರಾಮಾಯಣವೆಂಬ **ಅರ್ಣವೇ** - ಸಮುದ್ರದಲ್ಲಿ **ವಿಹರಂತಃ** - ವಿಹಾರ ಮಾಡುವ **ಮಹೀಯಾಂಸಃ**- ಶ್ರೇಷ್ಠರಾದ **ಗುರವಃ** - ಗುರುಗಳಾದ ಶ್ರೀ ಮಧ್ವರು **ಮಮ**-ನನಗೆ **ಪ್ರೀಯಂತಾಂ** - ಪ್ರಸನ್ನರಾಗಲಿ

ಸಮುದ್ರದಂತೆ ಅಪಾರವಾದ ಶತಕೋಟಿ ಗ್ರಂಥಗಳಷ್ಟು ವಿಸ್ತಾರವಾದ ಮೂಲರಾಮಾಯಣವು ರತ್ನಾಕರ ಎನಿಸಿದ ಸಮುದ್ರದಂತೆಯೆ ಸೂಕ್ತಿ ರತ್ನಗಳಿಗೆ ಆಕರವಾಗಿದೆ ಇಂಥ ಮೂಲರಾಮಾಯಣಸಾಗರದಲ್ಲಿ ವಿಹಾರ ಮಾಡಬಲ್ಲವರು ಶ್ರೇಷ್ಠಗುರುಗಳಾದ ಮಧ್ವರೆ ಸರಿ ಅವರು ನನಗೆ ಪ್ರಸನ್ನರಾಗಲಿ

**ಹನುಮಂತನ ದ್ವಾದಶ ನಾಮಗಳು**

**ಹನೂಮಾನ್ ಅಂಜನಾಸೂನು -**
**ರ್ವಾಯುಪುತ್ರೋ ಮಹಾಬಲಃ ।**
**ರಾಮೇಷ್ಟಃ ಫಲ್ಗುನಸಖಃ**
**ಪಿಂಗಾಕ್ಷೋಽಮಿತವಿಕ್ರಮಃ ॥**
**ಉದಧಿಕ್ರಮಣಶ್ಚೈವ ಸೀತಾಶೋಕವಿನಾಶನಃ ।**
**ಲಕ್ಷ್ಮಣಪ್ರಾಣದಾತಾ ಚ ದಶಗ್ರೀವಸ್ಯ ದರ್ಪಹಾ ॥**

೧ **ಹನೂಮಾನ್** - ಸರ್ವಜ್ಞ ೨ **ಅಂಜನಾಸೂನುಃ** - ಅಂಜನಾದೇವಿಯ ಪುತ್ರ ೩ **ವಾಯುಪುತ್ರ** - ವಾಯುದೇವನ ಪುತ್ರ ೪ **ಮಹಾಬಲಃ** - ಮಹಾಬಲಿಷ್ಠ ೫ **ರಾಮೇಷ್ಟಃ** - ಶ್ರೀರಾಮನಿಗೆ ಪ್ರಿಯ ೬ **ಫಲ್ಗುನಸಖಃ** - ಅರ್ಜುನನಿಗೆ ಮಿತ್ರನಾಗಿ ಅವನ ಧ್ವಜದಲ್ಲಿರುವವ ೭ **ಪಿಂಗಾಕ್ಷಃ** - ಕಂದು ಕಣ್ಣಿನವ ೮ **ಅಮಿತವಿಕ್ರಮಃ** - ಅಮಿತ ಪರಾಕ್ರಮಿ ೯ **ಉದಧಿಕ್ರಮಣಃ** - ಸಮುದ್ರ ದಾಟಿದವ ೧೦ **ಸೀತಾಶೋಕ ವಿನಾಶನಃ** - ಸೀತೆಯ ಶೋಕವನ್ನು ಕಳೆದವ ೧೧ **ಲಕ್ಷ್ಮಣ ಪ್ರಾಣದಾತಾ** - ಸಂಜೀವನ ತಂದು ಲಕ್ಷ್ಮಣನ ಪ್ರಾಣ ಉಳಿಸಿಕೊಟ್ಟವ ೧೨ **ದಶಗ್ರೀವಸ್ಯ**

**ದರ್ಪಹಾ**-ರಾವಣನ ದರ್ಪ ಮುರಿದವನು

**ಭೀಮಸೇನನ ದ್ವಾದಶ ನಾಮಗಳು**

**ಮಾರುತಿಃ ಪಾಂಡವೋ ಭೀಮೋ ಗದಾಪಾಣಿರ್ವೃಕೋದರಃ ।**
**ಕೌಂತೇಯಃ ಕೃಷ್ಣದಯಿತೋ ಭೀಮಸೇನೋ ಮಹಾಬಲಃ ।**
**ಜರಾಸಂಧಾಂತಕೃದ್ ವೀರೋ ದುಃಶಾಸನ ವಿನಾಶನಃ ॥**

೧ **ಮಾರುತಿಃ** -ವಾಯುದೇವನ ಪುತ್ರ ೨ **ಪಾಂಡವಃ**-ಪಾಂಡುರಾಜನ ಪುತ್ರ ೩ **ಭೀಮಃ**-ಶತ್ರು ಭಯಂಕರ ೪ **ಗದಾಪಾಣಿ** -ಗದೆಯನ್ನು ಹಿಡಿದುಕೊಂಡವ ೫ **ವೃಕೋದರಃ** - ವೃಕವೆಂಬ ಜಠರಾಗ್ನಿಪ್ರೇರಕ ೬ **ಕೌಂತೇಯಃ** - ಕುಂತೀದೇವಿಯ ಪುತ್ರ ೭ **ಕೃಷ್ಣ ದಯಿತಃ** - ಶ್ರೀಕೃಷ್ಣನಿಗೆ ಪ್ರಿಯ ೮ **ಭೀಮಸೇನಃ**-ಶಾಸ್ತ್ರವಿಮರ್ಶಕ ಮತ್ತು ಹೃದಯದಲ್ಲಿ ಭಗವಂತನನ್ನಿರಿಸಿಕೊಂಡವ ೯ **ಮಹಾಬಲಃ** - ಮಹಾಬಲಿಷ್ಠ ೧೦ **ಜರಾಸಂಧಾಂತಕೃತ್** - ಜರಾಸಂಧನನ್ನು ನಾಶ ಮಾಡಿದವ ೧೧ **ವೀರಃ** - ಕೈಗೊಂಡ ಯಾವುದೇ ಕಾರ್ಯವನ್ನು ಮಾಡಿ ಮುಗಿಸಬಲ್ಲವ ೧೨ **ದುಃಶಾಸನ ವಿನಾಶನಃ** - ದುಃಶಾಸನನನ್ನು ನಾಶ ಮಾಡಿದವ

**ಶ್ರೀಮಧ್ವಾಚಾರ್ಯರ ದ್ವಾದಶ ನಾಮಗಳು**

**ಪೂರ್ಣಪ್ರಜ್ಞೋ ಜ್ಞಾನದಾತಾ ಮಧ್ವೋ ಧ್ವಸ್ತದುರಾಗಮಃ ।**
**ತತ್ವಜ್ಞೋ ವೈಷ್ಣವಾಚಾರ್ಯೋ ವ್ಯಾಸಶಿಷ್ಯೋ ಯತೀಶ್ವರಃ ॥**
**ಆನಂದತೀರ್ಥಃ ಸನ್ನಮಾ ಜಿತವಾದೀ ಜಿತೇಂದ್ರಿಯಃ ॥**

೧ **ಪೂರ್ಣಪ್ರಜ್ಞಃ** - ಸರ್ವಜ್ಞರು ೨ **ಜ್ಞಾನದಾತಾ** - ಜ್ಞಾನದಾಯಕರು ೩ **ಮಧ್ವಃ** - ಆನಂದದಾಯಕ ಶಾಸ್ತ್ರ ರಚಿಸಿದವರು ೪ **ಧ್ವಸ್ತದುರಾಗಮಃ** - ದುಷ್ಟಶಾಸ್ತ್ರ ನಿರಾಸಮಾಡಿದವರು ೫ **ತತ್ವಜ್ಞಃ** - ತತ್ವಜ್ಞಾನಿಗಳು ೬ **ವೈಷ್ಣವಾಚಾರ್ಯಃ** - ವೈಷ್ಣವ ಸಂಪ್ರದಾಯದ ಆದಿ ಗುರುಗಳು ೭ **ವ್ಯಾಸಶಿಷ್ಯಃ** - ವೇದವ್ಯಾಸರ ಸಾಕ್ಷಾತ್ ಶಿಷ್ಯರು ೮ **ಯತೀಶ್ವರಃ** - ಯತಿಶಿರೋಮಣಿಗಳು

೯ **ಆನಂದತೀರ್ಥ** - ಮೋಕ್ಷಾನಂದ ಕಾರಣರು ೧೦ **ಸನ್ನಾಮಾ** - ನಿರ್ದೋಷವಾದ್ದರಿಂದ ಸತ್ ಎಂಬ ನಾಮ ಉಳ್ಳವರು ೧೧ **ಜಿತವಾದೀ** - ಪ್ರತಿವಾದಿಗಳನ್ನು ಗೆದ್ದವರು ೧೨ **ಜಿತೇಂದ್ರಿಯಃ** - ಇಂದ್ರಿಯ ನಿಗ್ರಹ ಉಳ್ಳವರು

**ಆನಂದತೀರ್ಥಸನ್ನಾಮ್ನಾಮೇವಂ ದ್ವಾದಶಕಂ ಜಪೇತ್ ।**
**ಲಭತೇ ವೈಷ್ಣವೀಂ ಭಕ್ತಿಂ ಗುರುಭಕ್ತಿ ಸಮನ್ವಿತಾಂ ॥**

**ಏವಂ** - ಈ ರೀತಿಯಾಗಿ **ಆನಂದತೀರ್ಥಸನ್ನಾಮ್ನಾಂ ದ್ವಾದಶಕಂ** ಆನಂದತೀರ್ಥರ ದ್ವಾದಶ ನಾಮಗಳನ್ನು **ಜಪೇತ್**- ಜಪಿಸಬೇಕು ಆಗ **ಗುರುಭಕ್ತಿ ಸಮನ್ವಿತಾಂ**-ಗುರುಭಕ್ತಿಯುಕ್ತವಾದ **ವೈಷ್ಣವೀಂ ಭಕ್ತಿಂ**-ವಿಷ್ಣುಭಕ್ತಿಯನ್ನು **ಲಭತೇ**-ಹೊಂದುತ್ತಾನೆ

**ಮನೋಜವಂ ಮಾರುತತುಲ್ಯವೇಗಂ**
**ಜಿತೇಂದ್ರಿಯಂ ಬುದ್ಧಿಮತಾಂ ವರಿಷ್ಠಂ ।**
**ವಾತಾತ್ಮಜಂ ವಾನರಯೂಥಮುಖ್ಯಂ**
**ಶ್ರೀರಾಮದೂತಂ ಶಿರಸಾ ನಮಾಮಿ ॥**

**ಮನೋಜವಂ** - ಮನೋವೇಗದಂಥ ವೇಗವುಳ್ಳ **ಮಾರುತತುಲ್ಯವೇಗಂ** - ವಾಯುವೇಗದಂಥ ವೇಗವುಳ್ಳ **ಜಿತೇಂದ್ರಿಯಂ** - ಇಂದ್ರಿಯ ನಿಗ್ರಹ ಉಳ್ಳ **ಬುದ್ಧಿಮತಾಂ**-ಬುದ್ಧಿವಂತರಲ್ಲಿ **ವರಿಷ್ಠಂ**-ಅತ್ಯಂತ ಶ್ರೇಷ್ಠನಾದ **ವಾತಾತ್ಮಜಂ** - ವಾಯುದೇವನ ಪುತ್ರನಾದ **ವಾನರಯೂಥ**-ಕಪಿಸೈನ್ಯಕ್ಕೆ **ಮುಖ್ಯಂ**-ಮುಖಂಡನಾದ **ಶ್ರೀರಾಮದೂತಂ**-ಶ್ರೀರಾಮನ ದೂತನಾದ ಹನುಮಂತನನ್ನು **ಶಿರಸಾ ನಮಾಮಿ**-ತಲೆ ಬಾಗಿ ನಮಿಸುವೆನು

ಮನೋವೇಗ ವಾಯು ವೇಗಗಳುಳ್ಳವನು, ಇಂದ್ರಿಯ ನಿಗ್ರಹ ಉಳ್ಳವನು, ಅತ್ಯಂತ ಬುದ್ಧಿಶಾಲಿ ವಾಯುದೇವನ ಮಗನಾಗಿ ಅವತರಿಸಿದವನು, ಕಪಿಸೈನ್ಯಕ್ಕೆ ಮುಖಂಡನಾಗಿ ಶ್ರೀರಾಮನ ದೂತನೆನಿಸಿದವನು, ಇಂಥ ಹನುಮಂತನಿಗೆ ತಲೆಬಾಗಿ ನಮಿಸುತ್ತೇನೆ

**ಬುದ್ಧಿರ್ಬಲಂ ಯಶೋ ಧೈರ್ಯಂ**
**ನಿರ್ಭಯತ್ವಮರೋಗತಾ ।**
**ಅಜಾಡ್ಯಂ ವಾಕ್‌ಪಟುತ್ವಂ ಚ**
**ಹನುಮತ್‌ಸ್ಮರಣಾದ್ ಭವೇತ್ ॥**

ಬುದ್ಧಿ ಬಲ ಯಶಸ್ಸು ಧೈರ್ಯ ನಿರ್ಭೀತಿ ಆರೋಗ್ಯ ಒಳ್ಳೆಯ ಚಟುವಟಿಕೆ ವಾಕ್ ಪಾಟವ ಇವೆಲ್ಲವೂ ಹನುಮಂತನ ಸ್ಮರಣ ಮಾತ್ರದಿಂದ ಲಭಿಸುತ್ತದೆ

**ನ ಮಾಧವಸಮೋ ದೇವೋ ನಚ ಮಧ್ವಸಮೋ ಗುರುಃ ।**
**ನ ತದ್ವಾಕ್ಯಸಮಂ ಶಾಸ್ತ್ರಂ ನಚ ತಜ್ಞಸಮಃ ಪುಮಾನ್ ॥**

**ಮಾಧವ ಸಮಃ**-ಶ್ರೀಹರಿಗೆ ಸಮಾನನಾದ **ದೇವಃ**-ದೇವನು **ನ**-ಇಲ್ಲ **ಮಧ್ವಸಮಃ**-ಮಧ್ವರಿಗೆ ಸಮನಾದ **ಗುರುಶ್ಚ**-ಗುರುವೂ **ನ**-ಇಲ್ಲ **ತದ್ವಾಕ್ಯ ಸಮಂ**-ಆ ಹರಿ ವಾಯುಗಳ ಮಾತಿಗೆ ಸಮಾನವಾದ **ಶಾಸ್ತ್ರಂ**-ಶಾಸ್ತ್ರವು **ನ**-ಇಲ್ಲ **ತಜ್ಞ**-ಆ ಶಾಸ್ತ್ರ ಬಲ್ಲವನಿಗೆ **ಸಮಃ**-ಸಮಾನನಾದ **ಪುಮಾನ್ ಚ**-ಪುರುಷನು **ನ**-ಇಲ್ಲ

ಶ್ರೀಹರಿಗೆ ಸಮನಾದ ದೇವನಿಲ್ಲ ಮಧ್ವರಿಗೆ ಸಮನಾದ ಗುರುವೂ ಇಲ್ಲ ಹರಿಯು ಉಪದೇಶಿಸಿದ ವೇದಾದಿ ಶಾಸ್ತ್ರಗಳಿಗೂ ಮಧ್ವರು ರಚಿಸಿದ ಮಹಾ ಗ್ರಂಥಗಳಿಗೂ ಸಮಾನವಾದ ಶಾಸ್ತ್ರ ಬೇರೆ ಇಲ್ಲ ಆ ಶಾಸ್ತ್ರ ಬಲ್ಲವನಿಗೆ ಸಮನಾದ ಜ್ಞಾನಿ ಪುರುಷನೂ ಇಲ್ಲ

**ಭೀಮಸೇನಸಮೋ ನಾಸ್ತಿ**
**ಸೇನಯೋರುಭಯೋರಪಿ ।**
**ಪಾಂಡಿತ್ಯೇ ಚ ಪಟುತ್ವೇ ಚ**
**ಶೂರತ್ವೇ ಚ ಬಲೇಽಪಿ ಚ ॥**

**ಪಾಂಡಿತ್ಯೇ ಚ** - ಪಾಂಡಿತ್ಯದಲ್ಲಿಯೂ **ಪಟುತ್ವೇ ಚ** - ನಿಪುಣತೆಯಲ್ಲಿಯೂ **ಶೂರತ್ವೇ ಚ** - ಶೌರ್ಯದಲ್ಲಿಯೂ **ಬಲೇಽಪಿ ಚ** -

ಬಲವಲ್ಲಿಯೂ **ಉಭಯೋಃ ಸೇನಯೋರಪಿ** - ಎರಡು ಸೈನ್ಯಗಳಲ್ಲಿಯೂ **ಭೀಮಸೇನಸಮಃ** - ಭೀಮಸೇನನಿಗ ಸಮನಾದವನು **ನಾಸ್ತಿ** - ಇಲ್ಲ

ಪಾಂಡಿತ್ಯ ನಿಪುಣತೆ ಶೌರ್ಯ ಮತ್ತು ಬಲಗಳಲ್ಲಿ ಕೌರವ ಪಾಂಡವ ಸೇನೆಗಳೆರಡಲ್ಲಿಯೂ ಭೀಮಸೇನನಿಗೆ ಸಮನಾದವನಿಲ್ಲ

**॥ ಇತಿ ಶ್ರೀ ಖಿಲ ವಾಯುಸ್ತುತಿಃ ಸಮಾಪ್ತಾ ॥**

**॥ ಶ್ರೀ ಕೃಷ್ಣಾರ್ಪಣಮಸ್ತು ॥**

# ಶ್ರೀಹರಿವಾಯುಸ್ತುತಿ ಪುರಶ್ಚರಣ ಫಲ

| ಶ್ಲೋಕ ಸಂಖ್ಯೆ - ಫಲ | ಶ್ಲೋಕ ಸಂಖ್ಯೆ - ಫಲ |
|---|---|
| 1 ವಾಕ್ ಸಿದ್ಧಿ | 2 ಪ್ರಜ್ಞಾ ಸಿದ್ಧಿ |
| 3 ಆಧಿ ವ್ಯಾಧಿ ಪರಿಹಾರ | 4 ಜಪ ಸಿದ್ಧಿ |
| 5 ಪರಾಕ್ರಮ ಬುದ್ಧಿ ವೈಶದ್ಯ ಸಿದ್ಧಿ | 6 ಸ್ನೇಹ ಲಾಭ, ಸಂತಾಪ ಪರಿಹಾರ |
| 7 ಬಂಧ ಮೋಕ್ಷ, ಶರೀರದಾರ್ಢ್ಯ | 8 ಉನ್ಮಾದ ಪರಿಹಾರ |
| 9 ಸ್ತ್ರೀ ಸುಖ | 10 ಸಂತಾನ ಲಾಭ, ಸುಖಲಾಭ |
| 11 ಶತ್ರು ಜಯ | 12 ಕ್ಲೇಶ ಪರಿಹಾರ, ಹರಿಭಕ್ತಿ ಸಿದ್ಧಿ |
| 13 ದಾರಿದ್ರ್ಯಪರಿಹಾರ, ಶತ್ರು ಪರಿಹಾರ | 14 ಪಿತೃಮಾತೃಭಕ್ತಿ, ಜನಾನುರಾಗ |
| 15 ಹರಿಭಕ್ತಿ ಸಿದ್ಧಿ | 16 ಮೋಕ್ಷ ಸಿದ್ಧಿ |
| 17 ಪೌರುಷ ಸಿದ್ಧಿ | 1೮ ಔಷಧ ಸಿದ್ಧಿ |
| 19 ಸ್ಥಿರ ಫಲ ಸಿದ್ಧಿ, ನಷ್ಟ ದ್ರವ್ಯಲಾಭ, ಭಗ್ನಅಂಗಲಾಭ | 2೦ ಸಂಗ್ರಾಮ ಜಯ |

| | |
|---|---|
| 21 ಇಷ್ಟ ವಿಯೋಗ ಪರಿಹಾರ | 22 ವಿಘ್ನ ಪರಿಹಾರ |
| 23 ಯುದ್ಧ ಸನ್ನಾಹ ಸಿದ್ಧಿ | 24 ರಾಜ ಸೇವಾ ಲಾಭ |
| 25. ವಾಕ್ ಪಟುತ್ವ, ಅಜ್ಞಾನ ನಾಶ | 26 ಗುರು ಸೇವಾ ಲಾಭ |
| 27 ಜ್ಞಾನ ಸಿದ್ಧಿ, ಕಾರ್ಯಸಿದ್ಧಿ | 28 ಮಿಥ್ಯಾಪವಾದ ಪರಿಹಾರ |
| 29 ಜನಾನುರಾಗ | 30 ಪ್ರತಿವಾದಿ ಜಯ |
| 31 ಶತ್ರು ನಿರಾಸ | 32 ಅಪಮೃತ್ಯುಪರಿಹಾರ ಶ್ರೇಷ್ಠತ್ವ ಸಿದ್ಧಿ |
| 33 ರೂಪ ಲಾವಣ್ಯ ಸಿದ್ಧಿ | 34 ಇಷ್ಟ ವಿಯೋಗಪರಿಹಾರ, ಪ್ರವಚನ ಕೌಶಲ ಸಿದ್ಧಿ |
| 35 ಮಹೈಶ್ವರ್ಯ ಲಾಭ | 36 ವೈರಾಗ್ಯ ಲಾಭ, ಸತ್ಪುತ್ರ ಪ್ರಾಪ್ತಿ |
| 37 ನಷ್ಟ ವಸ್ತು ಲಾಭ | 38 ರಾಜ ಪ್ರತಿಭಂದನಿವೃತ್ತಿ, ನಿಧಿಪ್ರಾಪ್ತಿ |
| 39 ಸಂತಾನ ಲಾಭ | 40 ಗ್ರಹಪೀಡಾ ಪರಿಹಾರ, ರಾಜಬಂಧ ಪರಿಹಾರ |
| 41 ಜ್ಞಾನಭಕ್ತಿವೈರಾಗ್ಯ ಮುಕ್ತಿಲಾಭ | |

# ಶ್ರೀಹರಿವಾಯು ಸ್ತುತಿ

ವೇದಾಂತದಂತೆ ಭವತಾರಕವೆನಿಸಿದ ಶ್ರೀಹರಿವಾಯು ಸ್ತುತಿ ಶ್ರೀಹರಿವಾಯುಗಳ ಅವತಾರತ್ರಯದ ಸಂಕ್ಷಿಪ್ತ ವರ್ಣನಾತ್ಮಕವಾಗಿದ್ದು ಭಕ್ತವರ್ಗಕ್ಕೆ ಅಮೂಲ್ಯವಾದ ನಿಧಿಯಾಗಿದೆ. ಅದರ ಅರ್ಥವಿಸ್ತಾರವನ್ನು ತಿಳಿಯದಿದ್ದರೆ ಆ ನಿಧಿ ಇದ್ದೂ ಇಲ್ಲದಂತೆ. ಆದ್ದರಿಂದ ಸರಳ ಸುಂದರ ಕನ್ನಡದಲ್ಲಿ ಹರಿವಾಯುಗಳಿಬ್ಬರ ಪರವಾದ ಎರಡು ಅರ್ಥಗಳನ್ನು ಸುಲಭವಾಗಿ ತಿಳಿಸಿ ಕೊಡುವ ಏಕೈಕ ಅಪೂರ್ವ ಕೃತಿ ಇದು.

—ಪ್ರಕಾಶಕರು